CPMG / KA / BG-GPO/13/2003-2005



# ಕರ್ನಾಟಕ ರಾಜ್ಯ ಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೨೧, ೨೦೦೫ ( ವೈಶಾಖ ೧, ಶಕ ವರ್ಷ ೧೯೨೭) | ಸಂಚಿಕೆ ೧೬ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆಹಾರ ವಸ್ತುಗಳ ಕಲಬೆರಕೆ ತಡೆಗಟ್ಟುವ ವಿಷಯದಲ್ಲಿ ಸಲಹಾ ಸಮಿತಿಯನ್ನು ಪುನ: ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 10 ಎಸ್‌ಪಿಎಫ್ 91 ದಿನಾಂಕ: 11.3.93.
2. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ರವರ ಪತ್ರ ಸಂಖ್ಯೆ: ಪಿಹೆಚ್: ಪಿಎಫ್‌ಎ:19: 04-05 ದಿನಾಂಕ: 6.7.2004.

**ಪ್ರಸ್ತಾವನೆ:**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಅವರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆಕುಕ 10 ಎಸ್‌ಪಿಎಫ್ 91, ದಿನಾಂಕ: 11.3.93ರಲ್ಲಿ ಔಷಧಿ ಮತ್ತು ಆಹಾರ ವಸ್ತುಗಳ ಕಲಬೆರಕೆ ತಡೆಗಟ್ಟುವ ವಿಷಯದಲ್ಲಿ ಈ ಹಿಂದೆ ರಾಜ್ಯದಲ್ಲಿ ಸಲಹಾ ಸಮಿತಿಯ 4 ವರ್ಷಗಳ ಕಾಲಮಿತಿಯು 1997ಕ್ಕೆ ಮುಗಿದಿರುವುದರಿಂದ ಆಹಾರ ಕಲಬೆರಕೆ ತಡೆಗಟ್ಟುವ ವಿಷಯದಲ್ಲಿ ರಾಜ್ಯಮಟ್ಟದ ಸಲಹಾ ಸಮಿತಿ ಇಲ್ಲದೆ ಪರಿಣಾಮಕಾರಿಯಾಗಿ ಆಹಾರ ವಸ್ತುಗಳ ಕಲಬೆರಕೆ ತಡೆಗಟ್ಟುವ ಕಾಯ್ದೆಯನ್ನು ಅನುಷ್ಠಾನಗೊಳಿಸಲು ಕಷ್ಟವಾಗುತ್ತಿದೆ ಎಂದು ತಿಳಿಸಿ, ಸದರಿ, ಸಮಿತಿಯನ್ನು ಮುಂದಿನ 4 ವರ್ಷಗಳ ಅವಧಿಗೆ ಪುನಃ ರಚಿಸಿ ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 365 ಸಿಜಿಇ 2004, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2005**

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ರಾಜ್ಯದಲ್ಲಿ ಆಹಾರ, ಔಷಧಿ ಮತ್ತು ಇತರೆ ವಸ್ತುಗಳ ಕಲಬೆರಕೆಯನ್ನು ಪರಿಣಾಮಕಾರಿಯಾಗಿ ತಡೆಗಟ್ಟಿ ನಿಯಂತ್ರಿಸುವ ದಿಸೆಯಲ್ಲಿ ಕೆಳಗೆ ನಮೂದಿಸಿದ ಉದ್ದೇಶಕ್ಕಾಗಿ ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಂತೆ ಒಂದು ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಮುಂದಿನ 4 ವರ್ಷಗಳ ಅವಧಿಗೆ ಪುನರ್ ರಚಿಸಲು ಅನುಮತಿಸಿದೆ.

| | | | |
|---|---|---|---|
| 1. | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | - | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | - | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | - | ಸದಸ್ಯರು |
| 4. | ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | - | ಸದಸ್ಯರು |
| 5. | ಸರ್ಕಾರದ ಜಂಟಿ ಕಾರ್ಯದರ್ಶಿ, ಆರ್ಥಿಕ ಇಲಾಖೆ | - | ಸದಸ್ಯರು |
| 6. | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.9 | - | ಸದಸ್ಯರು |
| 7. | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಮತ್ತು ಆಹಾರ (ಆರೋಗ್ಯ) ಪ್ರಾಧಿಕಾರ | - | ಉಪಾಧ್ಯಕ್ಷರು |
| 8. | ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಅಹಾರ ಕೋಶ) ಬೆಂಗಳೂರು | - | ಸದಸ್ಯರು |
| 9. | ಪ್ರಾಜಿಕುಷನ್ ಡೈರೆಕ್ಟರ್, ಬೆಂಗಳೂರು | - | ಸದಸ್ಯರು |
| 10. | ಮುಖ್ಯ ಆರೋಗ್ಯ ಅಧಿಕಾರಿ, ಬೆಂಗಳೂರು ಮಹಾನಗರ ಪಾಲಿಕೆ | - | ಸದಸ್ಯರು |
| 11. | ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು | - | ಸದಸ್ಯರು |
| 12. | ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಬೆಂಗಳೂರು | - | ಸದಸ್ಯರು |

13. ಅಧ್ಯಕ್ಷರು, ಛೇಂಬರ್ ಆಫ್ ಕಾಮರ್ಸ್, ಬೆಂಗಳೂರು - ಸದಸ್ಯರು
14. ಅಧ್ಯಕ್ಷರು, ಕರ್ನಾಟಕ ಗ್ರಾಹಕರ ಸೇವಾ ಸಂಸ್ಥೆ, ಭಾರತೀಯ ಗ್ರಾಹಕರ ಸೇವೆ ಅಧ್ಯಯನ ಸಂಸ್ಥೆ, ಎ-91 ವಿಜಯ ಕಿರಣ ಅಪಾರ್ಟ್‌ಮೆಂಟ್ಸ್, 32, ವಿಕ್ಟೋರಿಯಾ ರಸ್ತೆ, ಬೆಂಗಳೂರು-47 - ಸದಸ್ಯರು
15. ಹೋಟೆಲ್ ಉದ್ಯಮದಿಂದ ಒಬ್ಬ ಪ್ರತಿನಿಧಿ - ಸದಸ್ಯರು
16. ಜಂಟಿ ನಿರ್ದೇಶಕರು (ಪ್ರಯೋಗಾಲಯ) ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು - ಸದಸ್ಯ ಕಾರ್ಯದರ್ಶಿ
17. ಚೀಫ್ ಕೆಮಿಸ್ಟ್ ಮತ್ತು ಪಬ್ಲಿಕ್ ಅನಾಲಸಿಸ್ಟ್, ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು - ಹೆಚ್ಚುವರಿ ಸದಸ್ಯ ಕಾರ್ಯದರ್ಶಿ

**ಉದ್ದೇಶಗಳು:**

ಅ. ಆಹಾರ ಕಲಬೆರಕೆ ನಿಯಂತ್ರಣ ಕಾಯ್ದೆ 1954 ಹಾಗೂ ಕರ್ನಾಟಕ ಆಹಾರ ಕಲಬೆರಕೆ ನಿಯಂತ್ರಣ ನಿಯಮಗಳ ಪರಿಣಾಮಕಾರಿ ಅನುಷ್ಠಾನಕ್ಕೆ ಸಲಹೆ ನೀಡುವುದು;

ಆ. ಆಹಾರ ಕಲಬೆರಕೆ ತಡೆಗಟ್ಟುವ ಆಡಳಿತದಲ್ಲಿಯ ಲೋಪವೇನಾದರೂ ಇದ್ದರೆ ಅದನ್ನು ಹೋಗಲಾಡಿಸಲು ಸಲಹೆ ನೀಡುವುದು;

ಇ. ಆಹಾರ ಕಲಬೆರಕೆ ತಡೆಗಟ್ಟುವುದಕ್ಕೆ ಸಂಬಂಧಪಟ್ಟ ಪ್ರಾಧಿಕಾರಿ ವರ್ಗಕ್ಕೆ ವರ್ತಕರ ಗ್ರಾಹಕರ ಹಾಗೂ ತಯಾರಕರ ಕ್ರಿಯಾತ್ಮಕ ಸಹಕಾರ ನಿಶ್ಚಯ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಆರ್. ಶಂಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.401

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಡಿ. ಶಂಕರ್, ರೀಡರ್, ಸಿಟಿಇ, ಮೈಸೂರು, ಹಿಂದಿನ ಉಪ ನಿರ್ದೇಶಕರು, ಸಾಶಿಇ, ಧಾರವಾಡ, ಇವರು ಗ್ರಾಮೀಣ ಕೃಪಾಂಕ ಪಡೆದು ಶಿಕ್ಷಕರಾಗಿ ನೇಮಕಾತಿ ಕಳೆದುಕೊಂಡವರಿಗೆ ವಿಶೇಷ ನೇಮಕಾತಿಯಡಿಯಲ್ಲಿ ಶಿಕ್ಷಕರನ್ನು ನಿಗದಿತ ಅವಧಿಯೊಳಗೆ ನೇಮಕಾತಿ ಮಾಡಲು ವಿಫಲರಾದ ಆರೋಪದ ಮೇರೆಗೆ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ :**
1. ಸುತ್ತೋಲೆ ಸಂ: ಸಿಆಸುಇ 45 ಸೇನಾನಿ 2003 ದಿನಾಂಕ: 02.07.03.
2. ಅಧಿಸೂಚನೆ ಸಂ: ಡಿಪಿಎಆರ್: 58: ಎಸ್‌ಆರ್‌ಆರ್ 2003 ದಿನಾಂಕ: 12.11.2003.
3. ಸುತ್ತೋಲೆ ಸಂ: ಸಿಆಸುಇ 171: ಸೇನಾನಿ 03 ದಿನಾಂಕ: 23.12.2003
4. ಆಯುಕ್ತರು, ಸಾಶಿಇ, ಬೆಂಗಳೂರು, ಇವರ ವರದಿ ಸಂ: ಸಿ2 (4) ದೂರು 25:2004-05 ದಿನಾಂಕ: 5.2.2005.
5. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ವರದಿ ಸಂ: ಸಿ8:ಪ್ರಾಶಾಶಿ: ಗ್ರಾಕೃನೇ: 04-05 ದಿನಾಂಕ: 3.2.2005.

**ಪ್ರಸ್ತಾವನೆ:**

ದಿನಾಂಕ: 11.11.98 ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ (appointment) ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಆಯ್ಕೆ ಪಟ್ಟಿಗಳನ್ನು ಗ್ರಾಮೀಣ ಕೃಪಾಂಕ ರಹಿತವಾಗಿ ಪರಿಷ್ಕರಿಸಿ, ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯಲಾಗದ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದು ಹಾಕಲು ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ: 02.07.2003 ರ ಸುತ್ತೋಲೆಯಲ್ಲಿ ಸೂಚಿಸಲಾಗಿದೆ. ಈ ಸೂಚನೆಯಂತೆ ಶಿಕ್ಷಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಆಧಾರದ ಮೇಲೆ ನೇಮಕಾತಿ ಹೊಂದಿದ ಸಿಬ್ಬಂದಿಗಳನ್ನು ಸೇವೆಯಿಂದ ತೆಗೆದುಹಾಕಲ್ಪಟ್ಟಿತ್ತು. ಸೇವೆಯಿಂದ ತೆಗೆದುಹಾಕಲ್ಪಟ್ಟ ಗ್ರಾಮೀಣ ಕೃಂಪಾಕದ ಅಭ್ಯರ್ಥಿಗಳನ್ನು ಮಾನವೀಯತೆಯ ದೃಷ್ಟಿಯಿಂದ ಒಂದು ಬಾರಿಯ ಕ್ರಮವಾಗಿ ನೇಮಕಾತಿ ಮಾಡಲು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು 2003ನ್ನು ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 12.11.2003 ರಂದು ಹೊರಡಿಸಿದೆ.

ದಿನಾಂಕ: 12.11.2003ರ ಅಧಿಸೂಚನೆಯಂತೆ ಶಿಕ್ಷಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಆಧಾರದ ಮೇಲೆ ನೇಮಕಾತಿ ಹೊಂದಿ, ನಂತರ ಸೇವೆಯಿಂದ ತೆಗೆದು ಹಾಕಲ್ಪಟ್ಟ ಅಭ್ಯರ್ಥಿಗಳನ್ನು ನಿಗದಿತ ಅವಧಿಯೊಳಗೆ ನೇಮಕಾತಿ ಮಾಡಿಕೊಳ್ಳಲು ಸರ್ಕಾರ: ಇಲಾಖೆಯು ಸೂಚನೆ ನೀಡಿತ್ತು. ಆದರೆ ಧಾರವಾಡ, ಗದಗ ಹಾಗೂ ಹಾವೇರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಮರು ನೇಮಕಾತಿ ಮಾಡಲು ಈ ಅಧಿಕಾರವನ್ನು ಧಾರವಾಡ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಿಗೆ ವಹಿಸಲಾಗಿತ್ತು. ಆದರೆ ಉಪನಿರ್ದೇಶಕರಾಗಿದ್ದ ಶ್ರೀ ಡಿ. ಶಂಕರ್ ಇವರು ಸರ್ಕಾರದ: ಇಲಾಖೆಯ ಸೂಚನೆಯಂತೆ ನಿಗದಿತ ಅವಧಿಯೊಳಗೆ ಸಿಬ್ಬಂದಿಗಳಿಗೆ ನೇಮಕಾತಿ ಆದೇಶ ನೀಡಲು ವಿಫಲರಾಗಿ, ಈ ಕಾರ್ಯವನ್ನು ಪೂರ್ಣಗೊಳಿಸುವ ಮೊದಲೇ ಸನ್ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ರಿಟ್ ಅರ್ಜಿಗಳ ಸಂ: 536:2003 ಹಾಗೂ 562:2003 ರಲ್ಲಿ ಮೇಲೆ ಓದಲಾದ ಕ್ರಮಾಂಕ (2)ರ 12.11.2003 ರ ವಿಶೇಷ ನಿಯಮಗಳ ಸಿಂಧುತ್ವವನ್ನು ಪ್ರಶ್ನಿಸಿದ್ದು, ಸರ್ವೋಚ್ಚ ನ್ಯಾಯಾಲಯವು ದಿನಾಂಕ: 12.12.2003 ರಂದು ಮಧ್ಯಂತರ ತಡೆಯಾಜ್ಞೆ ನೀಡಿದ್ದರಿಂದ ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ: 23.12.2003 ರ ಸುತ್ತೋಲೆಯ ಮೂಲಕ ಮುಂದಿನ ಆದೇಶದವರೆಗೂ ವಿಶೇಷ ನಿಯಮದಡಿ ಯಾವುದೇ ನೇಮಕಾತಿಯನ್ನು ಮಾಡಬಾರದೆಂದು ಸೂಚನೆ ನೀಡಲಾಗಿತ್ತು.

ಈ ಪ್ರಕರಣದ ಬಗ್ಗೆ ಮೇಲೆ ಓದಲಾದ ಕ್ರಮಾಂಕ 3 ಮತ್ತು 4 ರಲ್ಲಿನ ದಿನಾಂಕಗಳಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಹಾಗೂ ಅಪರ ಆಯುಕ್ತರು, ಸಾಶಿಇ, ಧಾರವಾಡ, ಇವರುಗಳು ಅನುಕ್ರಮವಾಗಿ ವರದಿಯನ್ನು ಸಲ್ಲಿಸಿ ಮೇಲ್ಕಂಡ 3 ಜಿಲ್ಲೆಗಳಿಗೆ ಸಂಬಂಧಿಸಿದಂತೆ ವಿಶೇಷ ನೇಮಕಾತಿ ನಿಯಮದಡಿ ನಿಗದಿತ ಅವಧಿಯೊಳಗೆ ಗ್ರಾಮೀಣ ಕೃಪಾಂಕ ಪಡೆದು ನೇಮಕಾತಿ ಹೊಂದಿ ನಂತರ ಸೇವೆಯಿಂದ ತೆಗೆದು ಹಾಕಲ್ಪಟ್ಟ ಅಭ್ಯರ್ಥಿಗಳನ್ನು ಪುನಃ ನೇಮಕಾತಿ ಮಾಡಿಕೊಳ್ಳಲು ಧಾರವಾಡ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿದ್ದ ಶ್ರೀ ಡಿ. ಶಂಕರ್ ಇವರು ಸಂಪೂರ್ಣ ವಿಫಲರಾಗಿ, ಇವರ ಕರ್ತವ್ಯ ನಿರ್ಲಕ್ಷತೆ ಹಾಗೂ ದುರ್ನಡತೆಯಿಂದಾಗಿ ಅಭ್ಯರ್ಥಿಗಳು ನೇಮಕಾತಿಯಿಂದ ವಂಚಿತರನ್ನಾಗಿ ಮಾಡಿದ್ದಾರೆಂದು ಹಾಗೂ ಕೆಳಕಂಡ ಅಂಶಗಳನ್ನು ಸರ್ಕಾರದ ಗಮನಕ್ಕೆ ತಂದಿದ್ದಾರೆ.

1. ನೇಮಕಾತಿಯಿಂದ ಹೊರಗುಳಿದ 182 ಶಿಕ್ಷಕರಿಗೆ ಉಪನಿರ್ದೇಶಕರು, ಸಾಶಿಇ, ಧಾರವಾಡ ಇವರು ದಿನಾಂಕ: 25.11.2003 ರಂದು ಗದಗ ಮತ್ತು ಹಾವೇರಿ ಸಾಶಿಇ ಉಪನಿರ್ದೇಶಕರಿಗೆ ಪತ್ರ ಬರೆದಿದ್ದು, ಈ ಕುರಿತು ಮುಂದೆ ಯಾವ ಕ್ರಮವನ್ನು ಜರುಗಿಸಿಲ್ಲ. ದಿನಾಂಕ: 3.12.2004 ರಂದು ಕಡತವು ಸಹಿತ ಟಿಪ್ಪಣಿಯೊಂದಿಗೆ ಇಲ್ಲಿಗೆ ತಟಸ್ಥವಾಗಿದೆ. ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ದಿನಾಂಕ: 25.11.2003 ರಂದು ಒಟ್ಟು 108 ಖಾಲಿ ಹುದ್ದೆಗಳ ವಿವರಗಳನ್ನು ಹಾಗೂ ಗದಗ್ ಜಿಲ್ಲೆಗೆ ಸಂಬಂಧಿಸಿದಂತೆ ದಿನಾಂಕ: 27.11.2003 ರಂದು 49 ಖಾಲಿ ಹುದ್ದೆಗಳ ವಿವರಗಳನ್ನು ಉಪನಿರ್ದೇಶಕರು ಪೂರೈಸಿದ್ದಾರೆ. ದ್ವಿತೀಯ ಹಂತದ ಕೌನ್ಸಿಲಿಂಗ್‌ಗಾಗಿ ಖಾಲಿ ಹುದ್ದೆಗಳನ್ನು ಈ ಎರಡೂ ಜಿಲ್ಲೆಗಳಿಂದ ಪಡೆಯಲು ಲಿಖಿತವಾಗಿ ಪತ್ರ ವ್ಯವಹಾರ ನಡೆಸಿಲ್ಲ. ಈ ವಿಳಂಬದಿಂದಾಗಿ ನೇಮಕಾತಿಯ ಖಾಲಿ ಹುದ್ದೆಯ ಕೊರತೆ ಉಂಟಾಗಿ 182 ಜನರು ಹೊರಗುಳಿಯುವಂತಾಯಿತು.

2. ಧಾರವಾಡ ಜಿಲ್ಲೆಯಿಂದ ವಜಾಗೊಳಿಸಲ್ಪಟ್ಟ 357 ಶಿಕ್ಷಕರ ಹುದ್ದೆಗಳಿಗೆ ಸರ್ಕಾರದ ತೀರ್ಮಾನದ ನಿರೀಕ್ಷೆಯಲ್ಲಿ ಹುದ್ದೆಗಳನ್ನು ಸ್ಪಷ್ಟವಾಗಿ ಕಾಯ್ದುಕೊಳ್ಳುವಲ್ಲಿ ವಿಫಲರಾಗಿದ್ದಾರೆ.

3. ದಿನಾಂಕ: 18.11.2003 ರಂದು ಆಯುಕ್ತರು, ಸಾಶಿಇ, ಬೆಂಗಳೂರು, ಇವರ ಸಭಾ ನಡವಳಿಯಲ್ಲಿನ ಮಾರ್ಗಸೂಚಿಯಂತೆ ನೇಮಕಾತಿ ನಡೆಸಿಲ್ಲ.

4. ಆಯುಕ್ತರ ಮಾರ್ಗಸೂಚಿಯ ಪ್ರಕಾರ 19.11.2003 ರಿಂದ 30.11.2003 ರೊಳಗಾಗಿ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳಿಸಲು ತಿಳಿಸಲಾಗಿತ್ತು. ಅದರಂತೆ ವೇಳಾಪಟ್ಟಿ ರಚಿಸಿಕೊಂಡು ಕಾರ್ಯನಿರ್ವಹಿಸಿಲ್ಲ.

5. ಆಯುಕ್ತರ ಸುತ್ತೋಲೆಯಲ್ಲಿ ಹುದ್ದೆಗಳ ಕೊರತೆ ಉಂಟಾದಲ್ಲಿ ನೇಮಕಾತಿಯಿಂದ ಹೊರಗುಳಿಯುವ ಶಿಕ್ಷಕರ ಸಂಖ್ಯೆಗೆ ಅನುಗುಣವಾಗಿ ಸೂಪರ್ ನ್ಯೂಮರಿ ಹುದ್ದೆಗಳನ್ನು ರಚಿಸಿಕೊಂಡು ಅನುಮೋದನೆ ಪಡೆದು ನೇಮಕಾತಿ ಮಾಡಿಕೊಳ್ಳಲು ಸೂಚಿಸಿದ್ದರೂ ಕೂಡಾ, ಉಪನಿರ್ದೇಶಕರು, ಪ್ರಸ್ತಾವನೆ ಸಲ್ಲಿಸಿಲ್ಲ.

6. ಇಲಾಖೆಯ ಮಾರ್ಗಸೂಚಿಯಂತೆ ದಿನಾಂಕ: 19.11.2003 ರಿಂದ 30.11.2003 ರವರೆಗೆ ಕಾಲಾವಕಾಶವಿದ್ದು ನಂತರ ನ್ಯಾಯಾಲಯದ ತಡೆಯಾಜ್ಞೆಯ ವಿಷಯವು ದಿನಾಂಕ: 17.12.2003 ರಂದು ತಿಳಿದುಬಂದ ಕಾರಣ ಸುಮಾರು 25 ದಿನಗಳ ಕಾಲಾವಕಾಶವಿದ್ದಾಗ್ಯೂ ನೇಮಕಾತಿ ಪ್ರಕ್ರಿಯೆ ತ್ವರಿತಗತಿಯಲ್ಲಿ ನಿರ್ವಹಿಸಿಲ್ಲ.

7. ಖಾಲಿ ಹುದ್ದೆಗಳ ಮಾಹಿತಿಯನ್ನು ಎರಡೂ ಜಿಲ್ಲೆಗಳಿಂದ ಪಡೆದುಕೊಳ್ಳಲು ಸಿಬ್ಬಂದಿಯನ್ನು ನಿಯೋಜಿಸಿ ಅಥವಾ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರೊಂದಿಗೆ ಸಭೆ ನಡೆಸಿ ಕೂಡಲೇ ಇತ್ಯರ್ಥಪಡಿಸುವ ಬದಲು ಸಾಮಾನ್ಯ ಪತ್ರ ವ್ಯವಹಾರ ನಡೆಸುವಂತೆ ಪರಿಗಣಿಸಿದ್ದರಿಂದ ವಿಳಂಬಕ್ಕೆ ಕಾರಣವಾಗಿದೆ.

8. ನೇಮಕಾತಿ ಪ್ರಕ್ರಿಯೆ ದ್ವಿತೀಯ ಹಂತದಲ್ಲಿ ಕೌನ್ಸಿಲಿಂಗ್ ಜೇಷ್ಠತಾ ಪಟ್ಟಿ ತಯಾರಿಸಿ ಕ್ರಮಬದ್ಧವಾಗಿ ನೇಮಕಾತಿ ಆದೇಶ ನೀಡದೆ ಕಚೇರಿಗೆ ಬಂದ ಅಭ್ಯರ್ಥಿಗಳಿಗೆ ಆದೇಶ ನೀಡಿರುವ ಮೂಲಕ ನಿಯಮಗಳನ್ನು ಉಲ್ಲಂಘಿಸಿದ್ದಾರೆ.

9. ನೇಮಕಾತಿ ಕೊರತೆ ಬೀಳುವ ಹುದ್ದೆಗಳನ್ನು ದಿನಾಂಕ: 27.11.2003 ರಂದು ಪ್ರಾಶಾಶಿ ಸಹಶಿಕ್ಷಕರಿಗೆ ಮುಖ್ಯ ಶಿಕ್ಷಕರ ಹುದ್ದೆಗೆ ಬಡ್ತಿ ನೀಡುವುದರ ಮೂಲಕ ಖಾಲಿ ಹುದ್ದೆಗಳನ್ನು ಕ್ರೋಢೀಕರಿಸಿಕೊಳ್ಳಬೇಕಾಗಿತ್ತು. ಬಡ್ತಿ ಕೌನ್ಸಿಲಿಂಗ್‌ಗಾಗಿ ನಿಗದಿಪಡಿಸಿದ ದಿನಾಂಕದಿಂದ 15 ದಿನಗಳ ಕಾಲಾವಕಾಶ ನೀಡಿದ ನಂತರ ದಿನಾಂಕ: 12.12.2004 ರಂದು ಖಾಲಿಯಾಗುವ ಒಟ್ಟು 40 ಸಹಶಿಕ್ಷಕರ ಹುದ್ದೆಗಳನ್ನು ಬಳಸಿಕೊಂಡಿದ್ದಾರೆ. ಆದರೆ ಗದಗ್ ಹಾಗೂ ಹಾವೇರಿ ಜಿಲ್ಲೆಯಿಂದ ಖಾಲಿ ಹುದ್ದೆಯನ್ನು ಪಡೆಯುವ ಪ್ರಯತ್ನ ಮಾಡಿಲ್ಲ.

10. ವಜಾಗೊಂಡ ಶಿಕ್ಷಕರ ಮರು ನೇಮಕ ಮಾಡುವ ಸಂದರ್ಭದಲ್ಲಿ ಇದೊಂದು ಕಾಲಮಿತಿ ಆಧಾರಿತ ನಿರಂತರ ಪ್ರಕ್ರಿಯೆಯಾಗಿದ್ದು ಹೆಚ್ಚಿನ ಅವಧಿಯಲ್ಲಿ ಕಾರ್ಯನಿರ್ವಹಿಸಿ, ನೇಮಕಾತಿ ಪ್ರಕ್ರಿಯೆ ಮುಗಿಸಲು ಉಪನಿರ್ದೇಶಕರು ಪ್ರಯತ್ನಿಸಿಲ್ಲ.

ಆದ್ದರಿಂದ ಸದರಿಯವರನ್ನು ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಡುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 29 ಡಿಜಿಡಿ 2005 ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 ರಡಿ ಶ್ರೀ ಡಿ. ಶಂಕರ್, ರೀಡರ್, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮೈಸೂರ್, ಇವರನ್ನು, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸುವುದನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಶ್ರೀ ಡಿ. ಶಂಕರ್, ರೀಡರ್, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿದ್ದಾರೆ. ಸದರಿಯವರು ಸಕ್ಷಮ ಪ್ರಾಧಿಕಾರಿಯಾದ ಸರ್ಕಾರದ ಪೂರ್ವಾನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್. ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.402

**ವಿಷಯ :** ಶಿಕ್ಷಣ ಇಲಾಖೆಯಿಂದ ಸಮಾಜ ಕಲ್ಯಾಣ ಇಲಾಖೆಯ ಅಧೀನಕ್ಕೊಳಪಡುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘಕ್ಕೆ ವರ್ಗಾಯಿಸಲ್ಪಟ್ಟಿರುವ ವಸತಿ ಶಾಲೆಗಳಿಗೆ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 152 ಯೋಯೋಕಾ 2004, ದಿನಾಂಕ: 26.08.2004.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 152 ಯೋಯೋಕಾ 2004, ದಿನಾಂಕ: 20.1.2005.
3. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರ ಪತ್ರಸಂಖ್ಯೆ: ಕವಶಿಸಸ/ ಆರ್/ಶಿಕ್ಷಣ-1/2004-05, ದಿನಾಂಕ: 29.1.2005.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ದಿನಾಂಕ: 26.08.2004 ಮತ್ತು 20.1.2005ರ ಸರ್ಕಾರಿ ಆದೇಶಗಳಲ್ಲಿ ಶಿಕ್ಷಣ ಇಲಾಖೆಯಿಂದ ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲ್ಪಟ್ಟಿರುವ ವಸತಿ ಶಾಲೆಗಳ ನಿರ್ವಹಣೆಗಾಗಿ 2004-05ನೇ ಸಾಲಿನಲ್ಲಿ ಯೋಜನೇತರದಡಿ

ನಿಗದಿಪಡಿಸಿರುವಂತೆ ಒಟ್ಟು ರೂ. 555.04 ಲಕ್ಷಗಳ ಮಿತಿಯಲ್ಲಿ ಒಟ್ಟು 370.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿತ್ತು. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 29.1.2005ರ ತಮ್ಮ ಪತ್ರದಲ್ಲಿ ಬಿಡುಗಡೆ ಮಾಡಲಾದ ರೂ. 370.00 ಲಕ್ಷಗಳನ್ನು ಸಂಬಂಧಪಟ್ಟ ವಸತಿ ಶಾಲೆಗಳಿಗಾಗಿ ಬಿಡುಗಡೆ ಮಾಡಲಾಗಿದ್ದು, ಉಳಿದ ರೂ. 185.04 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2202-02-800-1-05-101 (ಯೋಜನೇತರ) ರೂ.166.87 ಲಕ್ಷ ಮತ್ತು 2202-01-800-9-01-101 (ಯೋಜನೇತರ) ರೂ.18.17 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಅನುದಾನ ಬಿಡುಗಡೆ ಮಾಡಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 152 ಯೋಯೋಕಾ 2004 ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**
**(ಇಡಿ 124 ಸ್ಕೀಮರ (ಯೂನಿಕ್) 2005, ದಿನಾಂಕ: 10ನೇ ಮಾರ್ಚ್ 2005)**

ಶಿಕ್ಷಣ ಇಲಾಖೆಯ ವತಿಯಿಂದ ವಿವಿಧ ಜಿಲ್ಲೆಗಳಲ್ಲಿ ನಡೆಯುತ್ತಿದ್ದು, ಸಮಾಜ ಕಲ್ಯಾಣ ಇಲಾಖೆಯ ಅಧೀನಕ್ಕೊಳಪಟ್ಟ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರಿಗೆ ವರ್ಗಾವಣೆಗೊಂಡ 32 ವಸತಿ ಶಾಲೆಗಳು ಮತ್ತು 4 ಅನುದಾನಿತ ವಸತಿ ಶಾಲೆಗಳ ನಿರ್ವಹಣೆಗಾಗಿ 2004-05ನೇ ಸಾಲಿನಲ್ಲಿ ಯೋಜನೇತರ ಅಡಿ ನಿಗದಿಪಡಿಸಿರುವ ಒಟ್ಟು ಮೊತ್ತ ರೂ. 555.04 ಲಕ್ಷಗಳ ಮಿತಿಯಲ್ಲಿ ಮೂರನೆಯ ಹಾಗೂ ಕೊನೆಯ ಕಂತಿನ ಅನುದಾನವಾಗಿ ರೂ. 185.04 ಲಕ್ಷಗಳನ್ನು (ರೂಪಾಯಿ ಒಂದುನೂರ ಎಂಬತ್ತೈದು ಲಕ್ಷ ಹಾಗೂ ನಾಲ್ಕು ಸಾವಿರಗಳು ಮಾತ್ರ) ಲೆಕ್ಕಶೀರ್ಷಿಕೆ 2202-02-800-1-05-101 (ಯೋಜನೇತರ) ರೂ. 166.87 ಲಕ್ಷ ಮತ್ತು 2202-01-800-9-01-101 (ಯೋಜನೇತರ) ರೂ. 18.17 ಲಕ್ಷ, ಒಟ್ಟು ರೂ. 185.04 ಲಕ್ಷಗಳನ್ನು ಸರ್ಕಾರವು ಸಮಾಜ ಕಲ್ಯಾಣ ಇಲಾಖೆ ಅಧೀನಕ್ಕೊಳಪಟ್ಟ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರಿಗೆ ತಕ್ಷಣ ಬಿಡುಗಡೆ ಮಾಡುತ್ತದೆ. ಸದರಿ ಮೊತ್ತದ ಬಿಲ್ಲುಗಳಿಗೆ ಮೇಲು ಸಹಿ ಮಾಡುವ ಅಧಿಕಾರವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ನೀಡಲಾಗಿದೆ.

ಸದರಿ ಮೊತ್ತವನ್ನು ಸರ್ಕಾರಿ ಆದೇಶ ಸಂಖ್ಯೆ: ಇಡಿ 110 ಯೋಯೋಕಾ 2002, ದಿನಾಂಕ: 6.5.2003ರಂದು ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲಾದ ರಾಜ್ಯವಲಯ ಲೆಕ್ಕ ಶೀರ್ಷಿಕೆಗಳಡಿ ನಿಗದಿಪಡಿಸಿರುವ ಆಯವ್ಯಯದ ಮಿತಿಯಲ್ಲಿ ಭರಿಸತಕ್ಕದ್ದು, ಜಿಲ್ಲಾವಲಯದಲ್ಲಿರುವ ವಸತಿನಿಲಯ ಪ್ರೌಢಶಾಲೆಗಳಿಗೆ ಸಂಬಂಧಿಸಿದ ಹಣವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ಗಳಿಂದ ಪಡೆಯಲು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರಿಗೆ ಸೂಚಿಸಲಾಗಿದೆ.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 153 ಐಎಫ್ (ಬಿಎ) 2005, ದಿನಾಂಕ: 19.02.2005 ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 315 ವೆಚ್ಚ-8/2005, ದಿನಾಂಕ: 07.03.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ, ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ(ಯೋಜನೆ), ಶಿಕ್ಷಣ ಇಲಾಖೆ.

ಪಿ.ಆರ್.403

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಭೈರದೇವನಹಳ್ಳಿ ಗ್ರಾಮದಲ್ಲಿ ಸರ್ವೆ ನಂ. 154ಎ ಮತ್ತಿತ್ತರೆಗಳಲ್ಲಿ ಒಟ್ಟು 11.15 ಎಕರೆ ಜಮೀನನ್ನು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 77(3)ಕ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಮೀಸಲಿಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಪತ್ರ ಸಂ: ಕಂ/ಭೂಸು/21/2004-05, ದಿನಾಂಕ: 12.10.2004. ಮತ್ತು 22.02.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಭೈರದೇವನಹಳ್ಳಿ ಗ್ರಾಮದ ಸರ್ವೆ ನಂಬರ್ 154ಎ ರಲ್ಲಿ 2.77 ಎಕರೆ, 153ಎ/2 ರಲ್ಲಿ 1.22 ಎಕರೆ ಜಮೀನನ್ನು ಕುಡಿಯುವ ನೀರಿನ ಕೆರೆಗಾಗಿ ಸರ್ವೆ ನಂ. 110ಎ ರಲ್ಲಿ 2.00 ಎಕರೆ ಜಮೀನನ್ನು ಆಸ್ಪತ್ರೆ, ಅಂಗನವಾಡಿ ಕಟ್ಟಡ, ಗ್ರಾಮ ಲೆಕ್ಕಿಗರ ವಸತಿ ಗೃಹ ಕಛೇರಿ, ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಗಾಗಿ ಮತ್ತು ಸರ್ವೆ ನಂ. 110ಎ ರಲ್ಲಿ 3.76 ಮತ್ತು 108ಎ ರಲ್ಲಿ 1.40 ಎಕರೆ ಜಮೀನನ್ನು ಆಶ್ರಯ ಯೋಜನೆಯ ಮನೆಗಳಿಗಾಗಿ ಹೀಗೆ ಒಟ್ಟು 11.15 ಎಕರೆ ಜಮೀನು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 60 ರನ್ವಯ ಸರ್ಕಾರದಲ್ಲಿ ಭೂನ್ಯಾಯ ಮಂಡಳಿಯ ಆದೇಶದ ಪ್ರಕಾರ ನಿಹಿತವಾಗಿದ್ದು ಸದರಿ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ, ಗ್ರಾಮಾಭಿವೃದ್ಧಿಗಾಗಿ ಬಳಸಿಕೊಳ್ಳಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 77(3) ರಡಿ ಮೀಸಲಿರಿಸುವಂತೆ ಬಳ್ಳಾರಿ ಜಿಲ್ಲಾಧಿಕಾರಿಗಳು ಪ್ರಸ್ತಾಪಿಸಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 110 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ಪ್ರಸ್ತಾವನೆಯನುಸಾರ ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಭೈರದೇವನಹಳ್ಳಿ ಗ್ರಾಮದ ಸರ್ವೆ ನಂ. 154ಎ ರಲ್ಲಿ 2.77 ಎಕರೆ, 153ಎ/2 ರಲ್ಲಿ 1.22 ಎಕರೆ ಜಮೀನನ್ನು ಕುಡಿಯುವ ನೀರಿಗಾಗಿ, ಸರ್ವೆ ನಂ.110ಎ ರಲ್ಲಿ 2.00 ಎಕರೆ ಆಸ್ಪತ್ರೆ, ಅಂಗನವಾಡಿ ಕಟ್ಟಡ, ಗ್ರಾಮಲೆಕ್ಕಿಗರ ವಸತಿ ಗೃಹ ಕಚೇರಿ, ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಗಾಗಿ ಮತ್ತು ಸರ್ವೆ ನಂ. 110ಎ ರಲ್ಲಿ 3.76 ಮತ್ತು 108ಎ ರಲ್ಲಿ 1.40 ಎಕರೆ ಜಮೀನನ್ನು ಆಶ್ರಯ ಯೋಜನೆಯ ಮನೆಗಳಿಗಾಗಿ ಹೀಗೆ ಒಟ್ಟು 11.15 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ಧಿಗಾಗಿ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 77(3) ರನ್ವಯ ಹಾಗೂ ಭೂಸುಧಾರಣೆ ನಿಯಮಾವಳಿ, 1974ರ ನಿಯಮ 27ಎ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

ಪಿ.ಆರ್.404

**ವಿಷಯ :** ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ದಿನಾಂಕ: 27.02.2004.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ದಿನಾಂಕ: 18.8.2004.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೋಸೊ 2002, ದಿನಾಂಕ: 23.09.2004.
4. ಆಡಳಿತಾಧಿಕಾರಿಗಳು: ಉಪ ವಿಭಾಗಾಧಿಕಾರಿಗಳು, ಬೀದರ್ ರವರ ಪತ್ರ ಸಂಖ್ಯೆ: ಕಂ: ಸಂಕೀರ್ಣ/45:2004-05, ದಿನಾಂಕ: 21.12.2004.

**ಪ್ರಸ್ತಾವನೆ:**

ಮೇಲೆ ಓದಲಾದ-(1)ರ ಸರ್ಕಾರಿ ಆದೇಶದಲ್ಲಿ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ(ಕೆ), ಗುಲ್ಬರ್ಗಾ ಈ ಸಂಸ್ಥೆಯ ಆಡಳಿತ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-27-ಎ ಪ್ರಕಾರ 6 ತಿಂಗಳ ಅವಧಿಗೆ ಉಪ ವಿಭಾಗಾಧಿಕಾರಿಗಳು ಬೀದರ್ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಅಧಿಕಾರಿಯವರು ಗುಲ್ಬರ್ಗಾದಿಂದ ಸುಮಾರು 120 ಕಿಮೀ. ದೂರದಲ್ಲಿರುವುದರಿಂದ ಸಂಸ್ಥೆಯ ಕಾರ್ಯಕಲಾಪಗಳನ್ನು ನೋಡಿಕೊಳ್ಳಲು ಅನಾನುಕೂಲವುಂಟಾಗುತ್ತಿದ್ದುದರಿಂದ ಮೇಲೆ ಓದಲಾದ-(2)ರ ಸರ್ಕಾರಿ ಆದೇಶದಲ್ಲಿ ಉಪ ವಿಭಾಗಾಧಿಕಾರಿಗಳು, ಬೀದರ್ ರವರ ಬದಲಿಗೆ ಉಪ ವಿಭಾಗಾಧಿಕಾರಿಗಳು, ಗುಲ್ಬರ್ಗಾ ಉಪ ವಿಭಾಗರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಮೇಲೆ ಓದಲಾದ-(3)ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ: 26.2.2005ಕ್ಕೆ ಮುಕ್ತಾಯಗೊಳ್ಳಲಿದ್ದು, ಆಡಳಿತಾಧಿಕಾರಿಯವರ ಅವಧಿಯನ್ನು ಮತ್ತೆ 6 ತಿಂಗಳ ಅವಧಿಗೆ ಮುಂದುವರಿಸುವಂತೆ ಸದರಿ ಸಂಸ್ಥೆಯ ಆಡಳಿತಾಧಿಕಾರಿಗಳು ಮೇಲೆ ಓದಲಾದ-(4)ರಲ್ಲಿ ಕೋರಿರುತ್ತಾರೆ. ಸದರಿಯವರ ಪತ್ರವನ್ನು ಕೂಲಂಕುಷವಾಗಿ ಪರಿಶೀಲಿಸಿ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೋಸೋ 2003, ಬೆಂಗಳೂರು ದಿನಾಂಕ: 10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-27-ಎ ಪ್ರಕಾರ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ(ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 27.02.2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪಿ. ಮಂಜುನಾಥ್**

ಪಿ.ಆರ್.405

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ :** ಶ್ರೀಮತಿ ಕಮಲಮ್ಮ ಸಮೂಹ-ಎ (ಕಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಮಂಡನಾಧಿಕಾರಿಯವರನ್ನು ಬದಲಾಯಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂ: ಕಂಇ 315 ಮುಸೇವಿ 1999 ದಿನಾಂಕ: 28.12.2004.

**ಪ್ರಸ್ತಾವನೆ:**

ಶ್ರೀಮತಿ ಕಮಲಮ್ಮ ಸಮೂಹ-ಎ (ಕಿರಿಯ ಶ್ರೇಣಿ) ಅಧಿಕಾರಿ ಇವರು ಈ ಹಿಂದೆ ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶ್ರೀ ಇಂಧುದರ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ. 8, 15ನೇ ಕ್ರಾಸ್, ನೂರು ಅಡಿ ರಿಂಗ್ ರಸ್ತೆ, 5ನೇ ಫೇಸ್, ಜೆ.ಪಿ.ನಗರ, ಬೆಂಗಳೂರು-78 ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಜಿ. ಶ್ರೀಧರ್, ಶಾಖಾಧಿಕಾರಿಗಳು, ಪ್ರಾರೋಪಣಾ ಶಾಖೆ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ವಿಧಾನಸೌಧ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಸರ್ಕಾರದ ದಿನಾಂಕ: 28.12.2004ರ ಆದೇಶದಲ್ಲಿ ನೇಮಿಸಿ ಆದೇಶಿಸಲಾಗಿತ್ತು. ದಿನಾಂಕ: 17.01.2005 ರಂದು ತಮ್ಮನ್ನು ಮಾನ್ಯ ಸಮಾಜ ಕಲ್ಯಾಣ ಸಚಿವರ ವಿಶೇಷ ಕರ್ತವ್ಯಾಧಿಕಾರಿಯಾಗಿ ನೇಮಿಸಿರುವುದರಿಂದ ಹಾಗೂ ಇಲ್ಲಿನ ಕೆಲಸ ಕಾರ್ಯಗಳು ಅಗಾದವಾಗಿರುವುದರಿಂದ ತಮ್ಮನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಬಾರದೆಂದು ಶ್ರೀ ಜಿ. ಶ್ರೀಧರ್, ಶಾಖಾಧಿಕಾರಿಗಳು, ಪ್ರಾರೋಪಣಾ ಶಾಖೆ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ರವರು ತಿಳಿಸಿರುತ್ತಾರೆ. ಆದುದರಿಂದ ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸಲು ಸರ್ಕಾರವು ತೀರ್ಮಾನಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 315 ಮುಸೇವಿ 1999, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂ. ಕಂಇ 315 ಮುಸೇವಿ 1999 ದಿನಾಂಕ: 28.12.2004ರ ಆದೇಶದಲ್ಲಿ ಶ್ರೀ ಜಿ. ಶ್ರೀಧರ್, ಶಾಖಾಧಿಕಾರಿಗಳು, ಪ್ರಾರೋಪಣಾ ಶಾಖೆ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿರುವುದನ್ನು ಬದಲಾಯಿಸಿ, ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಧಾರ್ಮಿಕ ದತ್ತಿ ಆಯುಕ್ತರ ಕಛೇರಿಯ ಕಛೇರಿ ಸಹಾಯಕರು-1 ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್.406

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ. (ಮುಜರಾಯಿ).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವಿಭಾಗೀಯ ಮಟ್ಟದ ಕಛೇರಿಗಳನ್ನು/ ಹುದ್ದೆಗಳನ್ನು ರದ್ದುಗೊಳಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಈಕಾಅ 2001 ಬೆಂಗಳೂರು ದಿನಾಂಕ: 13.2.2004.

2. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಕಸನಿ 13 ಸಿಬ್ಬಂದಿ 2001-02 ದಿನಾಂಕ: 20.06.2003. 19.03.2004 ಮತ್ತು ದಿನಾಂಕ: 01.07.2004.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು, ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಪರಿಶೀಲಿಸಲು ರಚಿಸಲಾಗಿರುವ ಸಚಿವ ಸಂಪುಟ ಉಪಸಮಿತಿಯು ಶಿಫಾರಸ್ಸು ಮಾಡಿರುವಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವಿಭಾಗೀಯ ಹಂತದ ಕಛೇರಿಗಳನ್ನು ಹುದ್ದೆಗಳೊಂದಿಗೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತದೆ.

ಉಲ್ಲೇಖ (2)ರಲ್ಲಿನ ಪತ್ರಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು, ಇಲಾಖೆಯ ವಿಭಾಗ ಮಟ್ಟದ ಉಪನಿರ್ದೇಶಕರು, ಕೇವಲ ವಿಭಾಗ ಮಟ್ಟದ ಅಧಿಕಾರಿಗಳಾಗಿ ಕಾರ್ಯನಿರ್ವಹಿಸದೆ ಆ ವಿಭಾಗದಲ್ಲಿ ಏರ್ಪಡಿಸಲಾಗುವ ರಾಜ್ಯ ಹಾಗೂ ವಿಭಾಗ ಮಟ್ಟದ ಕಾರ್ಯಕ್ರಮಗಳಾದ ಮೈಸೂರಿನ ವಿಶ್ವವಿಖ್ಯಾತ ದಸರಾ ಉತ್ಸವ, ಅಂತರಾಷ್ಟ್ರೀಯ ಖ್ಯಾತಿಯ ಹಂಪಿ ಉತ್ಸವ, ಬೆಳಗಾವಿಯ ಕದಂಬೋತ್ಸವ ಹಾಗೂ ಕರಾವಳಿ ಉತ್ಸವಗಳಂತಹ ಅನೇಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ನಿರ್ವಹಿಸಬೇಕಾಗುತ್ತದೆ. ಇದಲ್ಲದೆ ಕರ್ನಾಟಕ ಏಕೀಕರಣಗೊಂಡ 50 ವರ್ಷಗಳು ತುಂಬುತ್ತಿರುವ ಸವಿನೆನಪಿಗಾಗಿ ರಾಜ್ಯದ ಸಾಹಿತಿ/ಕಲಾವಿದರ/ ಕಲಾಸಂಸ್ಥೆಗಳ ರಾಜ್ಯಾದ್ಯಂತ ಮಾಹಿತಿಯನ್ನು ಸಂಗ್ರಹಿಸಿ ಸುವರ್ಣ ಸಂಸ್ಕೃತಿ ದರ್ಶಿಕೆ ಎಂಬ ಬೃಹತ್ ಡೈರೆಕ್ಟರಿಯನ್ನು ಹೊರತರಬೇಕಾಗಿರುತ್ತದೆ ಹಾಗೂ ಸುವರ್ಣ ಕರ್ನಾಟಕ 2006ರ ಉತ್ಸವವನ್ನು ವರ್ಷವಿಡೀ ಆಚರಿಸಬೇಕಾಗಿರುತ್ತದೆ. ಇಲಾಖೆಯ ಸಿಬ್ಬಂದಿಯ ಸಂರಚನೆಯಲ್ಲಿ ಜಿಲ್ಲಾ ಹಂತದಲ್ಲಿ ಸಹಾಯಕ ನಿರ್ದೇಶಕರ ಕಛೇರಿಗಳಿದ್ದು, ಒಂದು ವೇಳೆ ವಿಭಾಗ ಹಂತದ ಉಪನಿರ್ದೇಶಕರ ಕಛೇರಿಗಳನ್ನು ರದ್ದುಗೊಳಿಸಿದರೆ ನೇರವಾಗಿ ಕೇಂದ್ರ ಕಛೇರಿಯ ಜಂಟಿ ನಿರ್ದೇಶಕರು ಹಾಗೂ ನಿರ್ದೇಶಕರಿಗೆ ಮಾತ್ರ ಸಂಪರ್ಕವಿದ್ದು ನಡುವೆ ಜಿಲ್ಲಾ ಹಂತದ ಕಛೇರಿಗೆ ಪರಿಶೀಲನೆಗಾಗಲೀ/ ನಿಯಂತ್ರಣಕ್ಕಾಗಲೀ ಉಪನಿರ್ದೇಶಕರ ಕಛೇರಿಗಳು ಇಲ್ಲದಂತಾಗಿ ಆಡಳಿತದ ದಕ್ಷ ನಿರ್ವಹಣೆಗೆ ಅನಾನುಕೂಲವಾಗುತ್ತದೆ. ಆದ್ದರಿಂದ ವಿಭಾಗೀಯ ಮಟ್ಟದ ಕಛೇರಿಗಳನ್ನು ಸಿಬ್ಬಂದಿ ವರ್ಗದೊಂದಿಗೆ ಉಳಿಸಿಕೊಳ್ಳಲು ಇಲಾಖೆಯ ಹಾಗೂ ಆಡಳಿತದ ಹಿತದೃಷ್ಟಿಯಿಂದ ಅನಿವಾರ್ಯವಾಗಿದೆ ಎಂದು ವರದಿ ಮಾಡಿರುತ್ತಾರೆ.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 32 ಕಸನಿ 2004 ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಈ ಕೆಳಕಂಡ ವಿಭಾಗೀಯ ಮಟ್ಟದ ಕಛೇರಿಗಳ ಅಧಿಕಾರಿ ಮತ್ತು ಸಿಬ್ಬಂದಿಗಳ ವಿವರ ಈ ಕೆಳಗಿನಂತಿರುತ್ತದೆ.

| ಕಛೇರಿಯ ಹೆಸರು | ಮಂಜೂರಾದ ಹುದ್ದೆಗಳ ವಿವರ | | | | | |
|---|---|---|---|---|---|---|
| | ಉಪ ನಿರ್ದೇಶಕರು | ಶೀಘ್ರಲಿಪಿಗಾರ | ದ್ವಿದಸ | ವಾಹನ ಚಾಲಕ | ಗ್ರೂಪ್-ಡಿ | ಒಟ್ಟು |
| 1 | 2 | 3 | 4 | 5 | 6 | 7 |
| 1. ಉಪ ನಿರ್ದೇಶಕರ ಕಛೇರಿ, ಬೆಂಗಳೂರು ವಿಭಾಗ ಬೆಂಗಳೂರು | 1 | 1 | 2 | 1 | 1 | 6 |
| 2. ಉಪ ನಿರ್ದೇಶಕರ ಕಛೇರಿ, ಮೈಸೂರು ವಿಭಾಗ, ಮೈಸೂರು | 1 | 1 | 2 | 1 | 1 | 6 |
| 3. ಉಪನಿರ್ದೇಶಕರ ಕಛೇರಿ, ಬೆಳಗಾಂ ವಿಭಾಗ, ಬೆಳಗಾಂ | 1 | 1 | 2 | 1 | 1 | 6 |
| 4. ಉಪನಿರ್ದೇಶಕರ ಕಛೇರಿ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ | 1 | 1 | 2 | 1 | 1 | 6 |

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರು ಉಲ್ಲೇಖಿತ ಪತ್ರ ದಿನಾಂಕ: 19.03.2004ರಲ್ಲಿ ನೀಡಿರುವ ಮಾಹಿತಿಯಂತೆ ವಿಭಾಗೀಯ ಮಟ್ಟದ ನಾಲ್ಕು ಉಪನಿರ್ದೇಶಕರ ಕಛೇರಿಗಳಿಗೆ ವಿವಿಧ ವೃಂದದ ಒಟ್ಟು 24 ಹುದ್ದೆಗಳು ಮಂಜೂರಾಗಿದ್ದು, ಮಂಜೂರಾದ ಹುದ್ದೆಗಳ ಪೈಕಿ 22 ಹುದ್ದೆಗಳಲ್ಲಿ ಅಧಿಕಾರಿ/ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದು ಇಲಾಖೆಯಲ್ಲಿ 2 ಹುದ್ದೆಗಳು ಖಾಲಿ ಇರುತ್ತವೆ. ಉಪನಿರ್ದೇಶಕರು, ಬೆಳಗಾಂ ಹುದ್ದೆಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿ ಅಧಿಕಾರಿಯು ದಿನಾಂಕ: 29.2.2004 ರಂದು ವಯೋಮಿತಿ ನಂತರ ನಿವೃತ್ತಿ ಹೊಂದಿರುವುದರಿಂದ ಆ ಹುದ್ದೆಯು ಖಾಲಿ ಇರುತ್ತದೆ.

ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸು ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಉಲ್ಲೇಖಿತ ಆದೇಶದ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವಿಭಾಗೀಯ ಮಟ್ಟದ ಸಿಬ್ಬಂದಿ ವರ್ಗದವರ ಹುದ್ದೆಗಳನ್ನು ರದ್ದುಮಾಡುವ ಬಗ್ಗೆ ಸರ್ಕಾರವು ಪರಿಶೀಲಿಸಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ನೌಕರರನ್ನು ಇಲಾಖೆಯಲ್ಲಿ ಹಾಲಿ ಖಾಲಿ ಇರುವ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಯೋಜಿಸಲಾಗುವುದು.

ಮೇಲ್ಕಾಣಿಸಿದ ಕಾರಣಗಳಿಂದ ಉಲ್ಲೇಖ (1)ರಲ್ಲಿ ಕಾಣಿಸಿದ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 10 ಈಕಾಅ 2001 ದಿನಾಂಕ: 13.02.2004ರ ಷರತ್ತುಗಳಿಗೊಳಪಟ್ಟು ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ದಿನಾಂಕ: 01.03.2005 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

**ಷರತ್ತುಗಳು:**

1. ನಾಲ್ಕು ವಿಭಾಗಗಳ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಪನಿರ್ದೇಶಕರ ಹುದ್ದೆಗಳನ್ನು ಮತ್ತು ಸದರಿ ಕಛೇರಿಗಳಲ್ಲಿನ ಎಲ್ಲಾ ಹುದ್ದೆಗಳನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ರದ್ದುಪಡಿಸಲಾದ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ನೌಕರರನ್ನು

ಇಲಾಖೆಯಲ್ಲಿ ಖಾಲಿ ಇರುವ ಸಮಾನಾಂತರ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಯೋಜಿಸಿ/ ವರ್ಗಾಯಿಸಿ ಆದೇಶ ಹೊರಡಿಸುವುದು. ಆ ನಿಯಮಗಳ ಪ್ರಕಾರ ಅಗತ್ಯವಿದ್ದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.

2. ನಾಲ್ಕು ಉಪನಿರ್ದೇಶಕರುಗಳ ಕಛೇರಿಗಳನ್ನು ರದ್ದುಪಡಿಸಲಾಗಿರುವ ಹಿನ್ನೆಲೆಯಲ್ಲಿ ಇನ್ನು ಮುಂದೆ ವಿಭಾಗ ಮಟ್ಟದಲ್ಲಿ ನಿರ್ವಹಿಸುತ್ತಿದ್ದ ಕೆಲಸ ಕಾರ್ಯಗಳನ್ನು ಹಾಲಿ ಇರುವ ಜಿಲ್ಲಾ ಸಹಾಯಕ ನಿರ್ದೇಶಕರ ಮಟ್ಟದಲ್ಲಿ ನಿರ್ವಹಿಸಲಾಗುವುದೆಂಬುದರ ಬಗ್ಗೆ ವಿವರವಾದ ರೀತಿಯಲ್ಲಿ ಆಡಳಿತಾತ್ಮಕ ಮಾರ್ಗಸೂಚಿ ಅಥವಾ ಸುತ್ತೋಲೆಯನ್ನು ಹೊರಡಿಸಲು ಅನುವಾಗುವಂತೆ ಸರ್ಕಾರಕ್ಕೆ ಜರೂರು ಪ್ರಸ್ತಾವನೆ ಸಲ್ಲಿಸತಕ್ಕದ್ದು.
3. ಹೆಚ್ಚುವರಿ ಹುದ್ದೆಗಳೆಂದು ಗುರುತಿಸಲಾಗುವ ಸಿಬ್ಬಂದಿಯ ಸೇವೆಯನ್ನು ಅಗತ್ಯವಿದ್ದಲ್ಲಿ ಸಿ.ಆ.ಸು. ಇಲಾಖೆಯ ಮರು ನಿಯೋಜನೆ ಕೋಶದ ವಶಕ್ಕೆ ನೀಡಲು ಕ್ರಮ ತೆಗೆದುಕೊಳ್ಳತಕ್ಕದ್ದು. ಈ ಮಧ್ಯೆ ಆಡಳಿತದ ಹಿತದೃಷ್ಟಿಯಿಂದ ಯಾವುದಾದರೂ ಸುತ್ತೋಲೆ/ ಮಾರ್ಗಸೂಚಿ ನೀಡುವುದು ಅಗತ್ಯವೆಂದು ಕಾಣಿಸಿದಲ್ಲಿ ಅಂತಹ ಸುತ್ತೋಲೆಯನ್ನು ಹೊರಡಿಸಿ ಸಂಬಂಧಪಟ್ಟವರಿಗೆ ನಿರ್ದೇಶಕರ ಮಟ್ಟದಲ್ಲಿ ಮಾರ್ಗಸೂಚಿಯನ್ನು ಹೊರಡಿಸಿ ಮಾರ್ಗದರ್ಶನವನ್ನು ನೀಡುವುದು.
4. ಉಪನಿರ್ದೇಶಕರ, ಬೆಂಗಳೂರು, ಮೈಸೂರು, ಗುಲ್ಬರ್ಗಾ ಹಾಗೂ ಬೆಳಗಾಂ ಕಛೇರಿಗಳು ಸರ್ಕಾರಿ ಕಟ್ಟಡದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಲ್ಲಿ ಈ ಕಟ್ಟಡಗಳನ್ನು ಲೋಕೋಪಯೋಗಿ ಇಲಾಖೆಯ ವಶಕ್ಕೆ ಹಿಂತಿರುಗಿಸುವುದು. ಖಾಸಗಿ ಕಟ್ಟಡದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಲ್ಲಿ ಈ ಖಾಸಗಿ ಕಟ್ಟಡದ ಬಾಡಿಗೆಯ ಕರಾರನ್ನು ರದ್ದುಗೊಳಿಸಿ ಖಾಲಿ ಮಾಡತಕ್ಕದ್ದು. ಒಂದು ವೇಳೆ ಈ ಕಟ್ಟಡಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸೇರಿದ್ದಲ್ಲಿ ಅದನ್ನು ಇಲಾಖೆಯಲ್ಲೇ ಉಳಿಸಿಕೊಳ್ಳುವುದು.
5. ನಾಲ್ಕು ಉಪನಿರ್ದೇಶಕರ ಕಛೇರಿಗಳಲ್ಲಿರುವ ಪೀಠೋಪಕರಣಗಳನ್ನು ಸಧ್ಯಕ್ಕೆ ಜಿಲ್ಲೆಯ ಸಹಾಯಕ ನಿರ್ದೇಶಕರ ಕಛೇರಿಗಳಿಗೆ ನೀಡಿ ಮುಂದೆ ಅಗತ್ಯವಿರುವ ಕಛೇರಿಗಳಿಗೆ ಮರು ಹಂಚಿಕೆ ಮಾಡತಕ್ಕದ್ದು.
6. ಆಯಾ ವಿಭಾಗದಲ್ಲಿರುವ ಉಪನಿರ್ದೇಶಕರ ಕಛೇರಿಗಳಲ್ಲಿರುವ ಕಡತಗಳನ್ನು ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಹಸ್ತಾಂತರಿಸತಕ್ಕದ್ದು.
7. ಆಯಾ ವಿಭಾಗದಲ್ಲಿರುವ ಉಪನಿರ್ದೇಶಕರುಗಳಿಗೆ ಒದಗಿಸಲಾದ ವಾಹನಗಳನ್ನು ಕೇಂದ್ರ ಕಛೇರಿ ತನ್ನ ವ್ಯಾಪ್ತಿಗೆ ಪಡೆಯತಕ್ಕದ್ದು.
8. ಆಯಾ ವಿಭಾಗದಲ್ಲಿರುವ ಉಪನಿರ್ದೇಶಕರ ಕಛೇರಿಗಳಲ್ಲಿ ಅಳವಡಿಸಲಾಗಿರುವ ದೂರವಾಣಿಗಳನ್ನು ದೂರಸಂಪರ್ಕ ಇಲಾಖೆಗೆ ಹಿಂದಿರುಗಿಸಿ ಠೇವಣಿ ಹಣವನ್ನು ವಾಪಸ್ ಪಡೆದು ಸರ್ಕಾರದ ವಶಕ್ಕೆ ಜಮಾ ಮಾಡತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಆಡಳಿತ ಸುಧಾರಣೆ) ಟಿಪ್ಪಣಿ ಸಂಖ್ಯೆ: ಸಿಆಸುಇ 21 ಈಕಾಅ 2004 ದಿನಾಂಕ: 28.1.2005 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.96ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್.407

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2002-03ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ಮಾರ್ಚ್ 2005 ರೊಳಗೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 27(1)ರ ಅಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 37 ಸಿಎಲ್‌ಎಂ 2004 ಬೆಂಗಳೂರು ದಿನಾಂಕ: 28.2.2004.

**ಪ್ರಸ್ತಾವನೆ:**

ರಾಜ್ಯದ ಅನೇಕ ಸಹಕಾರ ಸಂಘಗಳು 2002-03ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ಮಾರ್ಚಿ 2004ರಲ್ಲಿ ನಡೆಸಲು ತೀರ್ಮಾನಿಸಿ ದಿನಾಂಕ: 31.03.2004ರ ವರೆಗೆ ಸಂಬಂಧಪಟ್ಟ ನಿಬಂಧಕರ ಅನುಮತಿ ಪಡೆದು ಮಾರ್ಚ್ 2004ರಲ್ಲಿ ಚುನಾವಣೆ ಮತ್ತು ಮಹಾಸಭೆಯನ್ನು ನಡೆಸಲು ಅವಕಾಶ ಕಲ್ಪಿಸಿಕೊಂಡಿದ್ದವು. ಆದರೆ ಸರ್ಕಾರಿ, ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 37 ಸಿಎಲ್‌ಎಂ 2004, ದಿನಾಂಕ: 20.02.2004, 21.02.2004 ಮತ್ತು 23.02.2004ರ ಪ್ರಕಾರ ಮಾರ್ಚಿ 2004ರ ಒಳಗೆ ನಡೆಸಬೇಕಿದ್ದ ಆಡಳಿತ ಮಂಡಳಿಯ ಚುನಾವಣೆಗಳನ್ನು ಮುಂದೂಡಿ ದಿನಾಂಕ: 30.09.2004 ರೊಳಗೆ ನಡೆಸಲು ನಿರ್ದೇಶಿಸಲಾಗಿತ್ತು. ಹಾಗೆಯೇ ಮಾರ್ಚ್ 2004ರ ಒಳಗೆ ನಡೆಸಬೇಕಿದ್ದ ಮಹಾಸಭೆಗಳನ್ನು ದಿನಾಂಕ: 30.09.2004 ರೊಳಗೆ ನಡೆಸಲು ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 37 ಸಿಎಲ್‌ಎಂ 2004 ದಿನಾಂಕ: 28.02.2004 ರಲ್ಲಿ ಆದೇಶಿಸಲಾಗಿರುತ್ತದೆ.

ಪುನಃ ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 37 ಸಿಎಲ್‌ಎಂ 2004, ದಿನಾಂಕ: 20.08.2004 ಮತ್ತು 01.09.2004ರ ಪ್ರಕಾರ ಹಾಲು ಉತ್ಪಾದಕರ ಸಹಕಾರ ಸಂಘಗಳನ್ನು ಹೊರತುಪಡಿಸಿ, ಉಳಿದ ಎಲ್ಲಾ ಸಹಕಾರ ಸಂಘಗಳ ಚುನಾವಣೆಗಳನ್ನು ದಿನಾಂಕ: 31.03.2005ರ ಒಳಗೆ ನಡೆಸಲು ಆದೇಶಿಸಲಾಗಿದೆ. ಪರಿಣಾಮವಾಗಿ 2002-03ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ: 30.09.2004ರ ಒಳಗೆ ನಡೆಸಬೇಕಾಗಿದ್ದ ಕೆಲವು ಸಹಕಾರ ಸಂಘಗಳು ಸದರಿ ಮಹಾ ಸಭೆಗಳನ್ನೂ ಸಹ ಮಾರ್ಚ್ 2005ರ ಒಳಗೆ ಚುನಾವಣೆಯ ಜೊತೆ ನಡೆಸಲು ಅನುಮತಿ ಕೋರಿ ಪ್ರಸ್ತಾವ ಸಲ್ಲಿಸುತ್ತಿರುತ್ತವೆ. ಮಹಾಸಭೆಗಳಿಗೆ ತಗಲುವ ಖರ್ಚು ಉಳಿತಾಯ ಮಾಡುವ ದೃಷ್ಟಿಯಿಂದ ಇದು ಸಮಂಜಸವಾಗಿರುತ್ತದೆ.

2003-04ನೇ ಸಾಲಿನ ಮಹಾಸಭೆಗಳನ್ನು ನಡೆಸಲು ನಿಗದಿತ ಕಾಲಾವಧಿಯನ್ನು ಆರು ತಿಂಗಳವರೆಗೆ ವಿಸ್ತರಿಸಿ ಅನುಮತಿ ನೀಡಲು ಸಂಬಂಧಪಟ್ಟ ನಿಬಂಧಕರುಗಳಿಗೆ ಅಧಿಕಾರ ಇರುತ್ತದೆ. ಆದ್ದರಿಂದ 2002-03ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ಮಾರ್ಚ್ 2005ರೊಳಗೆ ನಡೆಸಲು ಅನುಮತಿ ಕೋರಿ ಸಲ್ಲಿಸಿರುವ ಎಲ್ಲಾ ಸಹಕಾರ ಸಂಘಗಳ ಪ್ರಸ್ತಾವಗಳನ್ನು ಒಪ್ಪಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿ ಅನುಮತಿ ನೀಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ: 181 ಸಿಎಲ್‌ಎಂ 2004(ಪಿ) ಬೆಂಗಳೂರು, ದಿನಾಂಕ 2ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು 2002-03ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ: 30.09.2004 ರೊಳಗೆ ನಡೆಸದೆ ಇದ್ದ ಪಕ್ಷದಲ್ಲಿ ಅಂತಹ ಎಲ್ಲಾ ಸಹಕಾರ ಸಂಘಗಳಿಗೆ ಬಾಕಿಯಿರುವ 2002-03ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ: 31.03.2005 ರೊಳಗೆ ನಡೆಸಲು ಅನುವಾಗುವಂತೆ ಕರ್ನಾಟಕ

ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ; ಎಂದರೆ

**27ರ ಪ್ರಕರಣದಲ್ಲಿ:**

27ನೇ ಪ್ರಕರಣದ ಉಪ ಪ್ರಕರಣ (1)ರ ಪರಂತುಕದಲ್ಲಿನ 'ಆರು ತಿಂಗಳು' ಎಂಬ ಪದಗಳಿಗೆ ಬದಲಾಗಿ 'ಹದಿನೆಂಟು ತಿಂಗಳು' ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :** 1. ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31.03.2005ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯ ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

2. ಈ ಮಾರ್ಪಾಟು ಈಗಾಗಲೇ ವಾರ್ಷಿಕ ಮಹಾಸಭೆ ನಡೆಸಿರುವ ಹಾಗೂ ನ್ಯಾಯಾಲಯದ ಆದೇಶಗಳನ್ವಯ ಮಹಾಸಭೆಗಳನ್ನು ನಡೆಸುವ ಸಹಕಾರ ಸಂಘಗಳಿಗೆ ಅನ್ವಯವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್.408

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ. ಪಿ. ಸೋಮಯ್ಯ, ಹಿಂದಿನ ಉಪ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೇಗಾಲ ತಾಲ್ಲೂಕು ಮತ್ತು ಶ್ರೀ ಸುಂದರಯ್ಯ, ಹಿಂದಿನ ಗ್ರಾಮ ಲೆಕ್ಕಿಗ, ಬೆಂಗಳೂರು ಉತ್ತರ ತಾಲ್ಲೂಕು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :** 1. ಹಿಂದಿನ ಬೆಂಗಳೂರು ವಿಭಾಗದ ವಿಭಾಗಾಧಿಕಾರಿಗಳ ದಿನಾಂಕ: 27.02.2001ರ ಪತ್ರ ಸಂಖ್ಯೆ: ಸಿಸಿಎ:55:2000-01.

2. ದಿನಾಂಕ: 12.03.04ರ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 23 ಎಡಿಇ 2001.

3. ಲಿಖಿತ ಉತ್ತರ:
   1) ಶ್ರೀ ಎಂ ಪಿ. ಸೋಮಯ್ಯ, ದಿನಾಂಕ: 08.04.2004.
   2) ಶ್ರೀ ಹೆಚ್. ವೈ. ಸುಂದರಯ್ಯ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ಶ್ರೀ ಎಂ. ಪಿ. ಸೋಮಯ್ಯ ಹಾಲಿ ವಿಶೇಷ ತಹಶೀಲ್ದಾರ್, ಹನೂರು ಇವರು ಹಿಂದೆ 1998-99ನೇ ಸಾಲಿನಲ್ಲಿ ಬೆಂಗಳೂರು ಉತ್ತರ ತಾಲ್ಲೂಕು ದಾಸನಪುರ ಹೋಬಳಿಯಲ್ಲಿ ಉಪ ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಹೆಚ್. ವೈ. ಸುಂದರಯ್ಯ, ಗ್ರಾಮ ಲೆಕ್ಕಿಗ, ಗಿಡ್ಡೇನಹಳ್ಳಿ ಇವರ ಜೊತೆ ಸೇರಿ ಸದರಿ ಗ್ರಾಮದ ಸ.ನಂ. 80 ರಲ್ಲಿನ ಗೋಮಾಳದ ಜಮೀನಿಗೆ ಯಾವುದೇ ಅಧಿಕೃತ ದಾಖಲೆ/ ಆದೇಶಗಳು ಇಲ್ಲದಿದ್ದರೂ ಸಹ ಅಕ್ರಮವಾಗಿ 3 ಜನರ ಹೆಸರಿನಲ್ಲಿ ಮ್ಯುಟೇಷನ್‌ಗಳನ್ನು ಅಂಗೀಕರಿಸಿದ್ದು, ಸರ್ಕಾರದ ಬೆಲೆ ಬಾಳುವ ಸುಮಾರು 15 ಎಕರೆ ಜಮೀನನ್ನು ಅನಧಿಕೃತವಾಗಿ ಪರಭಾರೆ ಮಾಡಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಕರ್ತವ್ಯಲೋಪ ಎಸಗಿರುವ ಬಗ್ಗೆ ಅವರಿಬ್ಬರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಪತ್ರದಲ್ಲಿ ಹಿಂದಿನ ಬೆಂಗಳೂರು ವಿಭಾಗದ ವಿಭಾಗಾಧಿಕಾರಿಯವರು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಅಧಿಕಾರಿ/ನೌಕರರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರ ವರೆಗೆ) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಎಂ. ಪಿ. ಸೋಮಯ್ಯ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 8.4.04ರ ತಮ್ಮ ಲಿಖಿತ ಹೇಳಿಕೆಯಲ್ಲಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ ಮತ್ತು ಈ ಪ್ರಕರಣದಲ್ಲಿನ ಇನ್ನೊಬ್ಬ ಆರೋಪಿತರೆಂದು ಹೇಳಲಾದ ಶ್ರೀ ಹೆಚ್. ವೈ. ಸುಂದರಯ್ಯ, ಗ್ರಾಮ ಲೆಕ್ಕಿಗ ಇವರು ದಿನಾಂಕ: 12.3.04ರ ಕಾರಣ ಕೇಳುವ ನೋಟೀಸಿನಲ್ಲಿ ನಿಗದಿಗೊಳಿಸಲಾಗಿದ್ದ ಸಮಯದೊಳಗೆ ಹಾಗೂ ಇಂದಿನವರೆಗೂ ತಮ್ಮ ಲಿಖಿತ ಸಮಜಾಯಿಷಿಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಆದುದರಿಂದ ಸದರಿ ಕಾರಣ ಕೇಳುವ ನೋಟೀಸಿನಲ್ಲಿ ಸ್ಪಷ್ಟವಾಗಿ ತಿಳಿಸಿರುವಂತೆ ಅವರ ವಿರುದ್ಧದ ಆರೋಪಗಳ ಬಗ್ಗೆ ಅವರ ಪ್ರತಿವಾದ ಏನು ಇಲ್ಲವೆಂದು ಭಾವಿಸಿ ಏಕಪಕ್ಷಿಯವಾಗಿ ಮುಂದಿನ ಶಿಸ್ತು ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿ/ನೌಕರರ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 23 ಎಡಿಇ 2001, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಶ್ರೀ ಎಂ. ಪಿ. ಸೋಮಯ್ಯ, ಹಿಂದಿನ ಉಪ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೆಗಾಲ ತಾಲ್ಲೂಕು ಮತ್ತು ಶ್ರೀ ಹೆಚ್. ವೈ. ಸುಂದರಯ್ಯ, ಹಿಂದಿನ ಗ್ರಾಮ ಲೆಕ್ಕಿಗ, ಬೆಂಗಳೂರು ಉತ್ತರ ತಾಲ್ಲೂಕು, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್. ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ನಂ. 643 10ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮನೆಬಾಡಿಗೆ ನಿಯಂತ್ರಕರು (ಉತ್ತರ) ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ವಯ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್.409 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಇವರಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 13.09.2002ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 64 ಎಡಿಇ 2000.
2. ವಿಚಾರಣಾಧಿಕಾರಿಯವರ ದಿನಾಂಕ: 28.05.2003ರ ವಿಚಾರಣಾ ವರದಿ.
3. ದಿನಾಂಕ: 19.04.2004ರ ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 64 ಎಡಿಇ 2000.
4. ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ ಇವರ ದಿನಾಂಕ: 14.06.2004ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಸಿಂಗನಾಯಕನ ಹಳ್ಳಿ ಗ್ರಾಮದ ಸರ್ವೆ ನಂ. 111ರಲ್ಲಿ ಒಟ್ಟು 76 ಎಕರೆ ಸರ್ಕಾರಿ ಮುಫತ್ ಜಮೀನಿದ್ದು, ಸದರಿ ಜಮೀನಿನಲ್ಲಿ 10 ಎಕರೆ ಜಮೀನನ್ನು ಶ್ರೀ ಎ. ರಾಮಯ್ಯ ಎನ್ನುವವರು ಸೃಷ್ಟಿತ ದಾಖಲೆಗಳ ಆಧಾರದ ಮೇಲೆ ಕ್ರಯಪತ್ರ ಸಂಖ್ಯೆ: 1969/96-97, ದಿನಾಂಕ: 1.8.96 ರಂದು ಶ್ರೀ ಸಿ.ಆರ್. ಗೋವಿಂದರೆಡ್ಡಿ ಬಿನ್ ಸಿ. ನಾರಾಯಣರೆಡ್ಡಿ ಎಂಬುವವರಿಗೆ 5 ಎಕರೆ ಮತ್ತು ಕ್ರಯ ಪತ್ರ ಸಂಖ್ಯೆ: 1970/96-97, ದಿನಾಂಕ: 1.08.96 ರಂದು ಶ್ರೀ ಸಿ. ಆರ್. ಗೋವಿಂದ ರೆಡ್ಡಿಯವರಿಗೆ 5 ಎಕರೆ ಜಮೀನನ್ನು ಮಾರಾಟ ಮಾಡಿದ್ದು, ಈ ರೀತಿ ಸೃಷ್ಟಿತ ದಾಖಲೆಗಳ ಆಧಾರದ ಮೇಲೆ ನೋಂದಣಿಯಾದ ಜಮೀನನ್ನು ಕ್ರಮವಾಗಿ ಎಂ.ಆರ್/3/95-96 ಮತ್ತು ಎಂ.ಆರ್.39/95-96 ರಂತೆ ಶ್ರೀ ಸಿ. ಆರ್. ಗೋವಿಂದರೆಡ್ಡಿ ರವರ ಹೆಸರಿಗೆ ಖಾತೆ ಮಾಡಲು ಶಿಫಾರಸ್ಸು ಮಾಡಿ ಸರ್ಕಾರದ ಜಮೀನನ್ನು ಖಾಸಗಿ ವ್ಯಕ್ತಿಗಳ ಹೆಸರಿಗೆ ವರ್ಗಾಯಿಸಲು ಕಾರಣರಾಗಿದ್ದರೆಂಬ ಆರೋಪದ ಮೇಲೆ ಇತರರೊಂದಿಗೆ ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 13.09.2002ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್. ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸದರಿ ಆದೇಶದನ್ವಯ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 28.05.2003ರ ತಮ್ಮ ವಿಚಾರಣಾ ವರದಿಯಲ್ಲಿ ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮನವರ ವಿರುದ್ಧದ ಆರೋಪಗಳು ಸಾಬೀತಾಗಿರುತ್ತವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದು ಸಮರ್ಪಕವಾಗಿ ಕಂಡುಬಂದ ಕಾರಣ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಅದರ ಪ್ರತಿಯೊಂದಿಗೆ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 19.04.2004ರ ಎರಡನೇ ಕಾರಣ ಕೇಳುವ ನೋಟೀಸನ್ನು ಸದರಿ ಆಪಾದಿತ ಅಧಿಕಾರಿಗೆ ಜಾರಿಗೊಳಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 14.06.2004 ತಮ್ಮ ಲಿಖಿತ ಉತ್ತರವನ್ನು ಸಲ್ಲಿಸಿದ್ದು, ಅದನ್ನು ಪರಿಶೀಲಿಸಲಾಗಿ ತಮ್ಮ ವಿರುದ್ಧದ ಆರೋಪಗಳು ಸಾಬೀತಾಗಿರುವುದನ್ನು ಒಪ್ಪಿಕೊಂಡಿರುವುದಿಲ್ಲ ಹಾಗೂ ಅವುಗಳನ್ನು ಸಾರಾಸಗಟಾಗಿ ನಿರಾಕರಿಸಿ ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿನ ವಿಚಾರಣಾ ವರದಿ ಹಾಗೂ ಆರೋಪಿತ ಅಧಿಕಾರಿ ಸಲ್ಲಿಸಿರುವ ಲಿಖಿತ ಹೇಳಿಕೆ ಇವುಗಳನ್ನು ದಾಖಲೆಗಳ ಆಧಾರದಿಂದ ಪರಿಶೀಲಿಸಲಾಗಿ ಈ ಮೇಲ್ಕಂಡ ಅಧಿಕಾರಿ ಕರ್ತವ್ಯಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 64 ಎಡಿಇ 2000, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರೊಡನೆ ಓದಿಕೊಂಡಂತೆ ಸದರಿ ನಿಯಮಗಳ ನಿಯಮ 8(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹಾಲಿ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್.410 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಕೆ. ಟಿ. ತಿಮ್ಮಪ್ಪ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಪಂ, ಶಿವಮೊಗ್ಗ ಇವರ ಪತ್ರ ಸಂ. ಜಿಪಂಶಿ:ಸಿಬ್ಬಂದಿ (3):ಇಂ:ವಿವ:16: 04-05, ದಿನಾಂಕ: 6.7.04.
2. ಆದೇಶ ಸಂ. ಗ್ರಾಅಪ 143 ಜಿಪಅ 04, ದಿನಾಂಕ: 11.1.2005.
3. ಕಾರಣ ಕೇಳುವ ನೋಟೀಸಿನ ದಿನಾಂಕ: 19.1.2005.
4. ಆಪಾದಿತರ ಲಿಖಿತ ಹೇಳಿಕೆ ದಿನಾಂಕ: 3.2.2005.

**ಪ್ರಸ್ತಾವನೆ:**

ಶ್ರೀ ಕೆ. ಟಿ. ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಶಿವಮೊಗ್ಗ ಇವರು ದಿನಾಂಕ: 4.6.2004 ರಂದು ನಡೆದ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸಭೆಗೆ ಇವರು ಗೈರು ಹಾಜರಾಗುತ್ತಿದ್ದು, ಇದರಿಂದ ತಾಲ್ಲೂಕಿಗೆ ಸಂಬಂಧಿಸಿದ ವಿವಿಧ ಯೋಜನೆಗಳ ಕ್ರಿಯಾ ಯೋಜನೆಗಳಡಿ ಅನುಮೋದನೆಯಾದ ರಸ್ತೆ ಕುಡಿಯುವ ನೀರಿನ ಮತ್ತು ಮತ್ತಿತರ ಕಾಮಗಾರಿಗಳ ಬಗ್ಗೆ ಸಭೆಯಲ್ಲಿ ಜನ ಪ್ರತಿನಿಧಿಗಳಿಗೆ ಸರಿಯಾದ ಮಾಹಿತಿ ನೀಡದಿರುವಂತಾಗಿ, ಇವರು ತಾಲ್ಲೂಕು ಪಂಚಾಯತ್‌ನ ಪ್ರತಿ ಸಭೆಗಳಿಗೂ ಕೂಡ ಗೈರು ಹಾಜರಾಗುತ್ತಿರುವ ವಿಷಯವು ಸಭೆಗಳಲ್ಲಿ ಚರ್ಚೆಯಾಗಿ, ಸದರಿಯವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಸಭೆಯ ನಡವಳಿಯ ತೀರ್ಮಾನದ ಪ್ರಕಾರ ಅಗತ್ಯ ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯವರು ಸಲ್ಲಿಸಿದ್ದ ವರದಿಯ ಮೇಲೆ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಮೇಲೆ ಓದಲಾದ ಕ್ರಮ ಸಂ. (1)ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿದ್ದರು.

ಈ ಸಂಬಂಧ ಸರ್ಕಾರವು ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂ. (2)ರ ಆದೇಶದ ಪ್ರಕಾರ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಇಟ್ಟು, ಇವರ ಸೇವೆಯನ್ನು ಅಮಾನತ್ತುಗೊಳಿಸಲಾಗಿದೆ.

ತದನಂತರ ಇವರಿಗೆ ಅನುಬಂಧ-1 ರಿಂದ 4 ರಲ್ಲಿ ದೋಷಾರೋಪಣೆಯೊಡನೆ ಕಾರಣ ಕೇಳುವ ನೋಟೀಸಿನೊಂದಿಗೆ ಮೇಲೆ ಓದಲಾದ ಕ್ರಮ ಸಂ. (3)ರ ಪ್ರಕಾರ ಜಾರಿ ಮಾಡಲಾಗಿ, ಸದರಿಯವರು ಲಿಖಿತ ಉತ್ತರ ನೀಡಿ ತನ್ನ ಮೇಲಿನ ಆರೋಪವನ್ನು ನಿರಾಕರಿಸಿ ಮೇಲೆ ಓದಲಾದ ಕ್ರಮ ಸಂ. (4)ರ ಪತ್ರದಲ್ಲಿ ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ.

ಆದ್ದರಿಂದ, ಸರ್ಕಾರವು ಈ ಪ್ರಕರಣದ ಸತ್ಯಾ ಸತ್ಯತೆಯನ್ನು ಅರಿಯುವ ಮುನ್ನ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರ ಸೇವೆಯ ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 143 ಜಿಪಅ 04 ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10ರ (5)ನೇ ಉಪ ನಿಯಮದ (ಸಿ) ರನ್ವಯ ಶ್ರೀ ಕೆ. ಟಿ. ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಇವರ ಸೇವೆಯ ಅಮಾನತ್ತನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ, ಇವರನ್ನು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್.411

**ವಿಷಯ :** ಹೆಚ್. ಕೆ.ಡಿ.ಬಿ. ನಿಧಿ ಅಡಿಯಲ್ಲಿ ಬನ್ನಿಕೊಪ್ಪ ಮತ್ತು ಇತರೆ ಹಳ್ಳಿಗಳಿಗೆ ಪ್ರಾದೇಶಿಕ ನೀರು ಸರಬರಾಜು ಯೋಜನೆಯಲ್ಲಿ ಆಗಿರುವ ಹಣ ದುರುಪಯೋಗಕ್ಕೆ ಕಾರಣರಾದ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ಎಂ.ಡಿ. ಹುರಳಿಕೊಪ್ಪಿ, ಮತ್ತು ಶ್ರೀ ಎಸ್. ರಾಜಶೇಖರಯ್ಯ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಕೊಪ್ಪಳ ಇವರುಗಳ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ :**
1. ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 29 ಇಎನ್‌ಕ್ಯೂ 98, ದಿನಾಂಕ: 2.2.99
2. ಕಾರಣ ಕೇಳುವ ನೋಟೀಸ್‌ಗೆ, ಶ್ರೀ ಎಂ. ಡಿ. ಹುರಳಿಕೊಪ್ಪಿ ಇವರ ದಿನಾಂಕ: 4.3.99. ರಂದು ನೀಡಿದ ಲಿಖಿತ ಉತ್ತರ.
3. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 29 ಇಎನ್‌ಕ್ಯೂ 98, ದಿನಾಂಕ: 16.8.99 ಮತ್ತು 17.3.2001.
4. ಶ್ರೀ ವಿ. ಎಸ್. ಅರಹಟ್ಟಿ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರ ಪತ್ರ ದಿನಾಂಕ: 17.08.2001.
5. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 29 ಇಎನ್‌ಕ್ಯೂ 98, ದಿನಾಂಕ: 29.9.2001.
6. ವಿಚಾರಣಾಧಿಕಾರಿಗಳ ದಿನಾಂಕ: 8.04.2004ರ ವಿಚಾರಣಾ ವರದಿ.
7. 2ನೇ ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 29 ಇಎನ್‌ಕ್ಯೂ 98, ದಿನಾಂಕ: 10.5.04.
8. ಶ್ರೀ ಎಂ. ಡಿ. ಹುರಳಿಕೊಪ್ಪಿ ಮತ್ತು ಶ್ರೀ ಎಸ್. ರಾಜಶೇಖರಪ್ಪ ನಿವೃತ್ತ ಸಕಾಇಂ ಇವರ ದಿನಾಂಕ: 12.6.04.
9. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 101 ಸಿಎನ್‌ಎಸ್ 04, ದಿನಾಂಕ: 3.1.2005.

**ಪ್ರಸ್ತಾವನೆ:**

ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ನಿಧಿಯಡಿಯಲ್ಲಿ ಕೊಪ್ಪಳ ಜಿಲ್ಲೆಯ ಬನ್ನಿಕೊಪ್ಪ ಮತ್ತು ಇತರೆ ಹಳ್ಳಿಗಳಿಗೆ ಪ್ರಾದೇಶಿಕ ನೀರು ಸರಬರಾಜು ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಅವ್ಯವಹಾರವೆಸಗಿದ್ದಾರೆಂಬ ಕೊಪ್ಪಳ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಶ್ರೀ ಎಂ. ಡಿ. ಹುರಳಿಕೊಪ್ಪಿ ಮತ್ತು ಶ್ರೀ ಎಸ್. ರಾಜಶೇಖರಯ್ಯ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11 ರಂತೆ ಇಲಾಖಾ ವಿಚಾರಣಾ ನಡೆಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ ಆಪಾದಿತ ಅಧಿಕಾರಿಗಳಿಗೆ ಕಾರಣ ಕೇಳುವ ನೋಟಿಸಿನೊಂದಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಿತ್ತು. ಆಪಾದಿತರ ಮೇಲಿನ ಆಪಾದನೆಗಳ ಸಾರಾಂಶ ಈ ಕೆಳಕಂಡಂತಿದೆ.

1. ಬನ್ನಿಕೊಪ್ಪ ಮತ್ತು ಇತರೆ ಹಳ್ಳಿಗಳಿಗೆ ಪ್ರಾಂತೀಯ ನೀರು ಸರಬರಾಜು ಯೋಜನೆಗೆ ಅಂದಾಜು ವೆಚ್ಚ ರೂ. 3.30 ಕೋಟಿ ಆಗಿದ್ದು, ಕರ್ನಾಟಕ ಲೋಕೋಪಯೋಗಿ ಸಂಹಿತೆ (ಕೋಡ್) 167ನೇ ಪ್ಯಾರಾದಂತೆ ರೂ. 25,000-00 ಮೇಲ್ಪಟ್ಟ ಮೊತ್ತದ ಕಾಮಗಾರಿಗಳನ್ನು ಪಿ.ಡಬ್ಲ್ಯೂಡಿ 65 ರಂತೆ ಕಾಂಟ್ರ್ಯಾಕ್ಟ್ ಮೇರೆಗೆ ಕೈಗೊಳ್ಳಬೇಕಾಗಿತ್ತು. ಆದರೆ, ನಿಯಮ ಉಲ್ಲಂಘಿಸಿ ಸದರಿ ಕಾಮಗಾರಿಯನ್ನು ಇಲಾಖಾವತಿಯಿಂದ ಮಾಡಿದ್ದಲ್ಲದೆ ಸಕ್ರಮ ಪ್ರಾಧಿಕಾರಿಯ ಅನುಮೋದನೆ ಸಹ ಪಡೆದಿಲ್ಲ.
2. ಮೇಲ್ಕಂಡ ಯೋಜನೆಯಲ್ಲಿರುವಂತೆ ಜಲ ಮೂಲದಿಂದ ನೀರನ್ನು ಪಡೆದುಕೊಳ್ಳುವ ಮೊದಲ ಹಂತದ ಕಾಮಗಾರಿಯನ್ನು ಮುಗಿಸದೆ ಮತ್ತು ಏರು ಕೊಳವೆ ಮತ್ತು ಇತರೆ ಕೊಳವೆ ಸಂಪರ್ಕಗಳನ್ನು ಮಾಡದೆ ಅನಿಯೋಜಿತ ಮತ್ತು ಕ್ರಮಬದ್ಧವಲ್ಲದ ರೀತಿಯಲ್ಲಿ ಸಿವಿಲ್ ಕಾಮಗಾರಿಗಳನ್ನು ಮಾಡಿದ್ದು ಮತ್ತು ನೀರನ್ನು ಪಡೆದುಕೊಳ್ಳುವ ಜಾಗದಿಂದ ಮನ್ನಾಪುರ ಗ್ರಾಮದವರೆಗೂ ಹಾಕಬೇಕಾದ ಏರು ಕೊಳವೆಗಳ ಕಾಮಗಾರಿಗಳಿಗೆ ಟೆಂಡರ್‌ಗಳನ್ನು ಇತ್ಯರ್ಥಗೊಳಿಸುವ ಮುನ್ನವೇ ಕಾಮಗಾರಿ ಮಾಡಿದ್ದು ಸದರಿ ಏರು ಕೊಳವೆಗಳನ್ನು ಸೂಕ್ತ ರೀತಿಯಲ್ಲಿ ರಕ್ಷಿಸದೆ ವೃಥಾ ಹೊರಗೆ ಬಿಟ್ಟಿರುವುದರಿಂದ ಅವು ತುಕ್ಕು ಹಿಡಿದಿದ್ದರಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಲು ಇವರೇ ಕಾರಣರು.
3. ಪಿ.ಎಸ್.ಸಿ. ಕೊಳವೆಗಳನ್ನು ಹಾಯಿಸುವ ಬಗ್ಗೆ ಮಾಡಿದ್ದ ಮೂಲ ಯೋಜನೆಯನ್ನು ಮಾರ್ಪಡಿಸಿ, ಸದರಿ ಯೋಜನೆಯಲ್ಲಿ ಸಿ.ಐ. ಪೈಪುಗಳ ಅಳವಡಿಸಲು ಅಗತ್ಯವಿಲ್ಲದಿದ್ದರೂ ಸದರಿ ಪೈಪುಗಳನ್ನು ವೃಥಾ ಖರೀದಿಸಿ ಅವುಗಳನ್ನು ಉಪಯೋಗಿಸದೆ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿರುತ್ತದೆ.
4. ಈ ಯೋಜನೆಗೆ ಸಂಬಂಧಪಟ್ಟ ಪ್ರದೇಶಾಭಿವೃದ್ಧಿಯ ಸಚಿವರು ಮತ್ತು ಯೋಜನಾ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳು ಈ ಯೋಜನೆಯ ಕಾಮಗಾರಿಗಳನ್ನು ಪರಿವೀಕ್ಷಿಸಲು ಸ್ಥಳಕ್ಕೆ ಭೇಟಿ ನೀಡಿದಾಗ ಯೋಜನೆಗೆ ಖರೀದಿಸಲ್ಪಟ್ಟ ಸಿ.ಐ. ಪೈಪುಗಳನ್ನು ರಕ್ಷಣೆ ಇಲ್ಲದೆ ಹಾಗೆಯೇ ಬಿಟ್ಟಿರುವುದರಿಂದ ಮತ್ತು ಅಸಮರ್ಪಕವಾಗಿ ಕಾಮಗಾರಿಗಳನ್ನು ನಿರ್ವಹಿಸಿದ್ದರಿಂದ ಸರ್ಕಾರಕ್ಕೆ ಅಪಾರವಾದ ನಷ್ಟವಾಗಿರುವುದನ್ನು ಗಮನಿಸಿರುತ್ತಾರೆ.

ಶ್ರೀ ಎಂ. ಡಿ. ಹುರಳಿಕೊಪ್ಪಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮೇಲೆ ಮಾಡಲಾದ ಆರೋಪಗಳನ್ನು ಅಲ್ಲಗಳೆದು ಕಾರಣ ಕೇಳುವ ನೋಟಿಸ್‌ಗೆ ಉತ್ತರವನ್ನು ನೀಡಿದ್ದರು. ಶ್ರೀ ಎಸ್. ರಾಜಶೇಖರಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಕಾರಣ ಕೇಳುವ ನೋಟಿಸ್‌ಗೆ ಉತ್ತರವನ್ನು ನೀಡಲಿಲ್ಲ. ಸರ್ಕಾರವು ಶ್ರೀ ಎಂ. ಡಿ. ಹುರಳಿಕೊಪ್ಪಿ ಇವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದಾಗ ಇವರುಗಳ ಮೇಲಿನ ಆರೋಪಗಳಲ್ಲಿ ಮೇಲ್ನೋಟಕ್ಕೆ ಸತ್ಯಾಂಶವಿದೆ ಎಂದು ಕಂಡು ಬಂದಿದ್ದರಿಂದ ಹಾಗೂ ಶ್ರೀ ಎಸ್. ರಾಜಶೇಖರಯ್ಯ, ಇವರು ಲಿಖಿತ ಹೇಳಿಕೆ ಸಲ್ಲಿಸದಿದ್ದರಿಂದ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನರಿಯಲು ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (34)ರ ದಿನಾಂಕ: 16.8.99ರ ಆದೇಶದಲ್ಲಿ ಶ್ರೀ ವಿ. ಎಸ್. ಅರಹಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ವಿಚಾರಣಾಧಿಕಾರಿಗಳು ತನ್ನನ್ನು ಬೇರೊಂದು ಹುದ್ದೆಗೆ ಸರ್ಕಾರವು ನೇಮಕ ಮಾಡಿದ್ದರಿಂದ ಈ ಇಲಾಖಾ ವಿಚಾರಣೆ ನಡೆಸಲು ಸಾಧ್ಯವಾಗುತ್ತಿಲ್ಲವೆಂದು ಮೇಲೆ ಓದಲಾದ ಕ್ರಮ ಸಂ. (4)ರ ಪತ್ರದಲ್ಲಿ ತಿಳಿಸಿದ್ದರಿಂದ ಅವರಿಂದ ಈ ವಿಚಾರಣೆಯನ್ನು ಹಿಂಪಡೆದು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ: 29.9.2001ರ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿತ್ತು. ಅದರಂತೆ ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಿದ್ದರು. ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಲಾಗಿ ಶ್ರೀ ಎಂ. ಡಿ. ಹುರಳಿಕೊಪ್ಪಿ ಮತ್ತು ಶ್ರೀ ಎಸ್. ರಾಜಶೇಖರಯ್ಯ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಕೊಪ್ಪಳ ಇವರುಗಳ ಮೇಲೆ ಮಾಡಿರುವ ನಾಲ್ಕು ಆರೋಪಗಳೂ ಸಾಬೀತಾಗಿರುವುದೆಂದು ವಿಚಾರಣಾ ವರದಿಯಂತೆ ಕಂಡುಬಂದಿದ್ದರಿಂದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಲು ನಿರ್ಧರಿಸಿ ನಿಯಮಾನು ರೀತ್ಯ ಮೇಲೆ ಓದಲಾದ ಕ್ರಮ ಸಂ. (7)ರಲ್ಲಿ 2ನೇ ಕಾರಣ ಕೇಳುವ ನೋಟಿಸಿನೊಂದಿಗೆ ಆಪಾದಿತರಿಗೆ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸಿತ್ತು. ಆಪಾದಿತರು ಮೇಲೆ ಓದಲಾದ ಕ್ರಮ ಸಂ. (8) ರಂತೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದರು. ಆದರೆ ಅವರು ತಮ್ಮ ಹೇಳಿಕೆಗಳನ್ನು ಸಮರ್ಥಿಸುವ ಬಗ್ಗೆ ಯಾವುದೇ ದಾಖಲೆಗಳನ್ನು ಒದಗಿಸದ ಕಾರಣ ಹಾಗೂ ಅವರು ನೀಡಿರುವ ವಿವರಣೆಯನ್ನು ಒಪ್ಪಲು ಯಾವುದೇ ಸಕಾರಣಗಳು ಇಲ್ಲದ ಕಾರಣ ವಿಚಾರಣಾ ವರದಿಯಂತೆ ಈ ಇಬ್ಬರು ಅಧಿಕಾರಿಗಳು ಟೆಂಡರ್ ಕರೆಯದೆ ಮೇಲಾಧಿಕಾರಿಗಳ ಅನುಮತಿ ಪಡೆಯದೆ, ಕಾಮಗಾರಿಗಳಿಗಾಗಿ ಖರ್ಚು ಮಾಡಿದ ಹಣ ರೂ. 29,80,872-00 ಗಳಿಗೆ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ಶೇಕಡಾ 10 ರಷ್ಟು ನಿರ್ಧರಿಸಿ, ಈ ಹಣವನ್ನು ಕ.ಸ.ಸೇ ನಿಯಮ 214 ರನ್ವಯ ಅವರ ಡಿ.ಸಿ.ಆರ್.ಜಿ. ಯಿಂದ ಸಮಾನಾಂತರವಾಗಿ ಅವರುಗಳಿಂದ ವಸೂಲು ಮಾಡುವುದು ಮತ್ತು ಅವರು ಎಸೆಗಿರುವ ಕರ್ತವ್ಯ ಲೋಪಕ್ಕೆ ಸಂಬಂಧಿಸಿದಂತೆ ಆಪಾದಿತರ ಮೇಲಿನ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ಆಪಾದಿತರಿಗೆ ಅವರ ನಿವೃತ್ತಿ ವೇತನದಿಂದ ಶೇಕಡಾ 10 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರ ನಿರ್ಧರಿಸಿದೆ. ಆಪಾದಿತರು ಸೇವೆಯಿಂದ ನಿವೃತ್ತರಾಗಿರುವುದರಿಂದ ಅವರಿಗೆ ದಂಡನೆ ವಿಧಿಸುವ ಬಗ್ಗೆ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿದ್ದು, ಆಯೋಗವು ಮೇಲೆ ಓದಲಾದ ಕ್ರಮ ಸಂ. (9)ರ ಪತ್ರದಲ್ಲಿ ತನ್ನ ಸಹಮತಿ ನೀಡಿದ್ದು ಅದರಂತೆ ದಂಡನೆ ವಿಧಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 29 ಇಎನ್‌ಕ್ಯೂ 98 ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಡಿ. ಹುರಳಿಕೊಪ್ಪಿ ಮತ್ತು ಎಸ್. ರಾಜಶೇಖರಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಕೊಪ್ಪಳ ಇವರುಗಳು ಹೈದ್ರಾಬಾದ್ ಕರ್ನಾಟಕ

**ಪ್ರಸ್ತಾವನೆ:**

1993ನೇ ಸಾಲಿನಲ್ಲಿ ವೃತ್ತಿಪರ ಕೋರ್ಸುಗಳ ಪ್ರವೇಶಾತಿಯಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದಿಂದ ಕೆಲವು ವಿದ್ಯಾರ್ಥಿಗಳಿಗೆ ಸುಳ್ಳು ರ್‍ಯಾಂಕ್‌ಗಳನ್ನು ನೀಡಿ ಅವರುಗಳು ಪ್ರವೇಶವನ್ನು ಪಡೆಯಲು ಅನುಕೂಲ ಮಾಡಿಕೊಟ್ಟಿದ್ದಾರೆಂಬ ಆರೋಪ ಕುರಿತಂತೆ ಆಗ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಪ್ರಸ್ತುತ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರುಗಳನ್ನು ಸಕ್ಷಮ ನ್ಯಾಯಾಲಯದಲ್ಲಿ ಕಲಂ 120 (ಬಿ) ಸಹವಾಚ 420, 468, 474, 511 ಐ.ಪಿ.ಸಿ ಲಂಚ ನಿರೋಧ ಕಾಯ್ದೆ 1988ರ ಕಲಂ 7,8,9 ಮತ್ತು 13(1)(ಡಿ) ಸಹವಾಚ 13(2)ರ ಪ್ರಕಾರ ಅಭಿಯೋಜನೆಗೊಳಪಡಿಸಲು ಲಂಚ ನಿರೋಧ ಕಾಯ್ದೆ 1988ರ ಅಧಿನಿಯಮ 19(1)(ಬಿ) ಪ್ರಕಾರ ಮೇಲೆ ಓದಲಾದ ಆದೇಶ (3)ರಲ್ಲಿ ಅನುಮತಿ ನೀಡಲಾಗಿತ್ತು.

ಆರಕ್ಷಕ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ದಿನಾಂಕ:22–6–2004ರ ಅವರ ಪತ್ರದಲ್ಲಿ ಸರ್ಕಾರವು ಶ್ರೀ ಹೆಚ್.ಆರ್.ಶಾಂತಕುಮಾರಶೆಟ್ಟಿ, ಸಹಾಯಕ ನಿರ್ದೇಶಕರು (ಹಾಲಿ ನಿವೃತ್ತ) ಹಾಗೂ ಶ್ರೀ ಬಸವಮುನಿಯಪ್ಪ, ಹಿಂದಿನ ಪ್ರಥಮ ದರ್ಜೆ ಸಹಾಯಕರು, ರವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ದಿನಾಂಕ: 18–7–96ರಂದು ನೀಡಿದ ಆದೇಶಾನುಸಾರ ಸದರಿಯವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ನಗರ ವಿಶೇಷ ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ಸದರಿ ದೋಷಾರೋಪಣಾ ಪಟ್ಟಿಯು ವಿಶೇಷ ನ್ಯಾಯಾಲಯದ ಸಂಖ್ಯೆ: 16/97ರಲ್ಲಿ ವಿಚಾರಣೆಗೆ ದಾಖಲಾಗಿರುತ್ತದೆ. ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಗಳ ವಿಶೇಷ ನ್ಯಾಯಾಧೀಶರು ವಿಚಾರಣೆಯ ಸಮಯದಲ್ಲಿ ಆರೋಪಿತರನ್ನು ಅಭಿಯೋಜನೆಗೊಳಿಸುವ ಸಲುವಾಗಿ ಸರ್ಕಾರವು ನೀಡಿರುವ ಅಭಿಯೋಜನಾ ಮಂಜೂರಾತಿ ಆದೇಶವು ಕಾನೂನು ಬದ್ಧವಾಗಿಲ್ಲವೆಂದು ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಉದಾಹರಿಸುವುದರೊಂದಿಗೆ ವಿಶ್ಲೇಷಿಸುತ್ತಾ, ಆರೋಪಿತರ ವಿರುದ್ಧ ವಿಚಾರಣೆಯನ್ನು ಕೈ ಬಿಟ್ಟು ದಿನಾಂಕ: 29–1–2002ರಲ್ಲಿ ಆದೇಶ ನೀಡಿರುತ್ತಾರೆ ಹಾಗೂ ಕ್ರಮಬದ್ಧವಾದ ಅಭಿಯೋಜನಾ ಮಂಜೂರಾತಿ ಆದೇಶವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದುಕೊಂಡು ಎಲ್ಲಾ ಆರೋಪಿತರ ವಿರುದ್ಧ ಹೊಸದಾಗಿ ಆರೋಪಣಾ ಪಟ್ಟಿಯನ್ನು ಸಲ್ಲಿಸಬಹುದೆಂದು ತಿಳಿಸಿರುತ್ತಾರೆಂದು ವರದಿ ಮಾಡುತ್ತಾ ನ್ಯಾಯಾಲಯದ ಆದೇಶಾನುಸಾರ ಹೊಸದಾಗಿ ಕ್ರಮಬದ್ಧವಾದ ಮಂಜೂರಾತಿ ಆದೇಶವನ್ನು ನೀಡುವಂತೆ ಕೋರಿರುತ್ತಾರೆ.

1993ನೇ ಸಾಲಿನಲ್ಲಿ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಯಲ್ಲಿ ಅಕ್ರಮ ನಡೆದಿದೆಯೆಂದು ಶ್ರೀ ಎಂ.ಗಂಗಿರೆಡ್ಡಿ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಬಿ.ಓ.ಐ. ಸಿಟಿ ಡಿವಿಜನ್, ಕರ್ನಾಟಕ ಲೋಕಾಯುಕ್ತ, ಅವರು ಉಪ ಲೋಕಾಯುಕ್ತರಿಗೆ ನೀಡಿದ ದೂರನ್ನು ಅನುಸರಿಸಿ ತನಿಖಾಧಿಕಾರಿಗಳು ವಿವರವಾದ ತನಿಖೆ ನಡೆಸಿ ದಿನಾಂಕ: 16–1–95ರಂದು ಸಲ್ಲಿಸಿದ ತನಿಖಾ ವರದಿಯಲ್ಲಿ ಶ್ರೀ ಹೆಚ್.ಆರ್.ಶಾಂತಕುಮಾರಶೆಟ್ಟಿ, ಹಿಂದಿನ ಸಹಾಯಕ ನಿರ್ದೇಶಕರು (ಹಾಲಿ ನಿವೃತ್ತ) ಹಾಗೂ ಶ್ರೀ ಎಸ್.ಜೆ.ಬಸವಮುನಿಯಪ್ಪ, ಹಿಂದಿನ ಪ್ರಥಮ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರುಗಳು ಖಾಸಗಿ ವ್ಯಕ್ತಿಗಳಾದ ಶ್ರೀ ಸುರೇಶ್ ಸವಣೂರು, ಶ್ರೀ ಎಂ.ಜಿ.ಮುರುಗೋಡ್, ಶ್ರೀ ಸೋಮಶೇಖರ್ ಕೋಟಿ ಮತ್ತು ಶ್ರೀ ಹಾಜಿ ಜಮ್ದಾರ್ ಇವರುಗಳೊಡನೆ ಶಾಮೀಲಾಗಿ ಪ್ರತಿ ಅಭ್ಯರ್ಥಿಯಿಂದ ರೂ.25,000/– ಪಡೆದಿರುವುದಕ್ಕೆ ಪ್ರತಿಯಾಗಿ ಸಿಇಟಿಯಲ್ಲಿ ಕಡಿಮೆ ರ್‍ಯಾಂಕ್‌ಗಳಿಸಿದ ಶ್ರೀ ಸೌಮ್ಯ ನವಿತ್, ಶ್ರೀ ಎಸ್.ಹೆಚ್.ಅಜೇಯ್, ಕು.ಗಾಲಿ ಮೃದುಲಾ, ಶ್ರೀ ಆಶಿಶ್ ದೊಲಾರಿ ಜೋಶಿ, ಕು. ಶೀತಲ್ ಟಿ.ವೊಗರಾಲಿ ಮತ್ತು ಕು.ಕೋವಿ ಕವಿತಾ ಅವರುಗಳು ವೈದ್ಯಕೀಯ ಸೀಟು ಪಡೆಯಲು ಅವರಿಗೆ ಕ್ರಮವಾಗಿ ಶ್ರೀ ಪ್ರಶಾಂತ್ ಜಿ., ಶ್ರೀ ಬಿ.ಕೃಷ್ಣಮೂರ್ತಿ, ಶ್ರೀ ಪ್ರಾಂಶುಗುಪ್ತ, ಶ್ರೀ ಕೆ.ಲಕ್ಷ್ಮೀನಾರಾಯಣ, ಶ್ರೀ ಆಶಿಶ್‌ಲುತ್ರಾ ಮತ್ತು ಶ್ರೀ ರಾಜಲಂಗರ್ ರವರುಗಳು ಪಡೆದಿದ್ದ ಹೆಚ್ಚಿನ ರ್‍ಯಾಂಕ್ ನಂಬರನ್ನು ನೀಡುವ ಮೂಲಕ ಅವ್ಯವಹಾರ ಎಸಗಿರುವುದು ಸಾಬೀತಾಗಿದೆಯೆಂದು ವರದಿ ಮಾಡಿರುತ್ತಾರೆ. ಈ ಸಂಬಂಧ ಮೇಲ್ಕಂಡ ಆಪಾದಿತರ ವಿರುದ್ಧ ಎಲ್‌ಎಸಿ ಕ್ರೈಂ.ನಂ.21/93 ರಿಂದ 26/93ನ್ನು ದಾಖಲಿಸಿರುವುದಾಗಿ ಸಹ ತಿಳಿಸಿರುತ್ತಾರೆ.

ಕರ್ನಾಟಕ ಸರ್ಕಾರವು, ದಿನಾಂಕ:3–6–95 ಸಂಖ್ಯೆ: ಲೋಕ್ / ಐಎನ್‌ವಿ (ಜಿ) ಸಿಟಿ / ಕ್ರೈಂ.21 /93 ರಿಂದ 26/93ರ ಪತ್ರಗಳ ಜೊತೆ ಮಹಾ ನಿರ್ದೇಶಕರು, ಬ್ಯೂರೋ ಆಫ್ ಇನ್‌ವೆಸ್ಟಿಗೇಷನ್, ಕರ್ನಾಟಕ ಲೋಕಾಯುಕ್ತ, ಇವರು ಕಳುಹಿಸಿಕೊಟ್ಟಿರುವ ಪ್ರಕರಣದ ಅಂತಿಮ ತನಿಖಾ ವರದಿ ಹಾಗೂ ದಾಖಲೆಗಳನ್ನು ಪರಿಶೀಲಿಸಿದೆ.

(i) ಪ್ರಕರಣ ಸಂಖ್ಯೆ 21:93ಕ್ಕೆ ಸಂಬಂಧಿಸಿದಂತೆ ತನಿಖಾ ದಾಖಲಾತಿಗಳಾದ:–

(ಅ) ತನಿಖಾಧಿಕಾರಿಗಳ ಅಂತಿಮ ವರದಿ,

(ಆ) ಮಹಜರ್ ಕಾಪಿಗಳು,

(ಇ) ಎಫ್.ಐ.ಆರ್.,

(ಈ) ಶ್ರೀ ಸೌಮ್ಯ ನವೀತ್ ಮತ್ತು ಶ್ರೀ ಪ್ರಶಾಂತ್.ಜಿ ರವರುಗಳ ಅರ್ಜಿ ಫಾರಂ,

(ಉ) ಶ್ರೀ ಸೌಮ್ಯ ನವೀತ್‌ರವರ ಅಡ್ಮಿಷನ್ ಫಾರಂ

(ಊ) ಶ್ರೀ ಸೌಮ್ಯ ನವೀತ್ ರವರ ಪ್ರವೇಶಾತಿ ಪತ್ರದ ಪ್ರತಿಗಳು

(ಋ) ಶ್ರೀ ಸೌಮ್ಯ ನವೀತ್ ರವರಿಗೆ ಶ್ರೀ ಹೆಚ್.ಆರ್.ಶಾಂತಕುಮಾರ್ ಶೆಟ್ಟಿ ರವರು ನೀಡಿರುವ ರ್‍ಯಾಂಕ್ ಸರ್ಟಿಫಿಕೇಟ್

(ೠ) ರ್‍ಯಾಂಕಿಂಗ್ ಲಿಸ್ಟ್,

(ಎ) ಬರಹ ತಜ್ಞರ ವರದಿ,

(ಏ) ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ

ಮೇಲ್ಕಂಡ ದಾಖಲಾತಿಗಳು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಇರುವ ಆಪಾದನೆಯನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಇವುಗಳ ಪರಿಶೀಲನೆಯಿಂದ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಹಾಲಿ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರುಗಳು ಪೇಮೆಂಟ್ ಕೋಟಾದಲ್ಲಿ ವೈದ್ಯಕೀಯ ಕೋರ್ಸಿಗೆ ಪ್ರವೇಶ ಬಯಸಿದ್ದ ಶ್ರೀ ಸೌಮ್ಯ ನವೀತ್ ರವರಿಗೆ ಪ್ರವೇಶ ಪತ್ರದ ನೊಂದಣಿ ಸಂಖ್ಯೆ: FA0865 ಮತ್ತು ಮೆಡಿಕಲ್ ರ್‍ಯಾಂಕ್ ಸಂಖ್ಯೆ: 20128ಕ್ಕೆ ಬದಲಾಗಿ ಸಿಇಟಿಯ ಮತ್ತೊಬ್ಬ ಅಭ್ಯರ್ಥಿ ಶ್ರೀ ಪ್ರಶಾಂತ್.ಜಿ ರವರ ಪ್ರವೇಶ ಪತ್ರದ ನೊಂದಣಿ ಸಂಖ್ಯೆ:TF2575 ಮತ್ತು ರ್‍ಯಾಂಕಿಂಗ್ ಸಂಖ್ಯೆ: 3242ನ್ನು ನೀಡಿರುವುದು ಕಂಡುಬರುತ್ತದೆ.

(ii) ಪ್ರಕರಣ ಸಂಖ್ಯೆ 22:93ಕ್ಕೆ ಸಂಬಂಧಿಸಿದಂತೆ ತನಿಖಾ ದಾಖಲಾತಿಗಳಾದ:–

(ಅ) ತನಿಖಾಧಿಕಾರಿಗಳ ಅಂತಿಮ ವರದಿ,

(ಆ) ಮಹಜರ್ ಕಾಪಿಗಳು,

(ಇ) ಎಫ್.ಐ.ಆರ್.,

(ಈ) ಎಸ್.ಹೆಚ್.ಅಜಯ್ ರವರ ಅಡ್ಮಿಷನ್ ಫಾರಂ,

(ಉ) ಬಿ.ಕೃಷ್ಣಮೂರ್ತಿರವರ ಅರ್ಜಿ ಫಾರಂ

(ಊ) ಎಸ್.ಹೆಚ್.ಅಜಯ್ ರವರ ಪ್ರವೇಶಾತಿ ಪತ್ರದ ಪ್ರತಿಗಳು

(ಋ) ಎಸ್.ಹೆಚ್.ಅಜಯ್ ರವರಿಗೆ ಶ್ರೀ ಹೆಚ್.ಆರ್.ಶಾಂತಕುಮಾರ್ ಶೆಟ್ಟಿ ರವರು ನೀಡಿರುವ ರ‍್ಯಾಂಕ್ ಸರ್ಟಿಫೀಕೇಟ್

(ೠ) ರ‍್ಯಾಂಕಿಂಗ್ ಲಿಸ್ಟ್,

(ಎ) ಬರಹ ತಜ್ಞರ ವರದಿ,

(ಏ) ಸಾಕ್ಷಿಗಳ ಹೇಳಿಕೆಗಳು ಇತ್ಯಾದಿ

ಮೇಲ್ಕಂಡ ದಾಖಲಾತಿಗಳು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಇರುವ ಆಪಾದನೆಯನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಇವುಗಳ ಪರಿಶೀಲನೆಯಿಂದ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಹಾಲಿ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರುಗಳು ಪೇಮೆಂಟ್ ಕೋಟಾದಲ್ಲಿ ವೈದ್ಯಕೀಯ ಕೋರ್ಸಿಗೆ ಪ್ರವೇಶ ಬಯಸಿದ್ದ ಎಸ್.ಹೆಚ್.ಅಜಯ್ ರವರಿಗೆ ಪ್ರವೇಶ ಪತ್ರದ ನೊಂದಣಿ ಸಂಖ್ಯೆ: HF0389 ಮತ್ತು ಮೆಡಿಕಲ್ ರ‍್ಯಾಂಕಿಂಗ್ ಸಂಖ್ಯೆ: 7151ಕ್ಕೆ ಬದಲಾಗಿ ಸಿಇಟಿಯ ಮತ್ತೊಬ್ಬ ಅಭ್ಯರ್ಥಿ ಶ್ರೀ ಬಿ.ಕೃಷ್ಣಮೂರ್ತಿ ರವರ ಪ್ರವೇಶ ಪತ್ರದ ನೊಂದಣಿ ಸಂಖ್ಯೆ:JK0293 ಮತ್ತು ರ‍್ಯಾಂಕಿಂಗ್ ಸಂಖ್ಯೆ: 3895ಎ ನ್ನು ನೀಡಿರುವುದು ಕಂಡು ಬರುತ್ತದೆ.

(iii) ಪ್ರಕರಣ ಸಂಖ್ಯೆ 23:93ಕ್ಕೆ ಸಂಬಂಧಿಸಿದಂತೆ ತನಿಖಾ ದಾಖಲಾತಿಗಳಾದ:–

(ಅ) ತನಿಖಾಧಿಕಾರಿಗಳ ಅಂತಿಮ ವರದಿ,

(ಆ) ಮಹಜರ್ ಕಾಪಿಗಳು,

(ಇ) ಎಫ್.ಐ.ಆರ್.,

(ಈ) ಕು.ಗಾಲಿ ಮೃದುಲಾ ರವರ ಅಡ್ಮಿಷನ್ ಫಾರಂ

(ಉ) ಪ್ರಾಂಶುಗುಪ್ತರವರ ಅರ್ಜಿ ಫಾರಂಗಳು

(ಊ) ಕು.ಗಾಲಿ ಮೃದುಲ ರವರ ಪ್ರವೇಶಾತಿ ಪತ್ರದ ಪ್ರತಿಗಳು,

(ಋ) ಕು.ಗಾಲಿ ಮೃದುಲ ರವರಿಗೆ ಶಾಂತಕುಮಾರಶೆಟ್ಟಿರವರು ನೀಡಿರುವ ರ‍್ಯಾಂಕ್ ಸರ್ಟಿಫಿಕೇಟ್

(ೠ) ರ‍್ಯಾಂಕಿಂಗ್ ಲಿಸ್ಟ್,

(ಎ) ಬರಹ ತಜ್ಞರ ವರದಿ,

(ಏ) ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ

ಮೇಲ್ಕಂಡ ದಾಖಲಾತಿಗಳು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಇರುವ ಆಪಾದನೆಯನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಇವುಗಳ ಪರಿಶೀಲನೆಯಿಂದ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಹಾಲಿ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರುಗಳು ಪೇಮೆಂಟ್ ಕೋಟಾದಲ್ಲಿ ವೈದ್ಯಕೀಯ ಕೋರ್ಸಿಗೆ ಪ್ರವೇಶ ಬಯಸಿದ್ದ ಕು.ಗಾಲಿ ಮೃದುಲ ರವರಿಗೆ ಪ್ರವೇಶ ಪತ್ರದ ನೊಂದಣಿ ಸಂಖ್ಯೆ: JS1956, ಮೆಡಿಕಲ್ ರ‍್ಯಾಂಕಿಂಗ್ ಸಂಖ್ಯೆ: 11987ಕ್ಕೆ ಬದಲಾಗಿ ಸಿಇಟಿಯ ಮತ್ತೊಬ್ಬ ಅಭ್ಯರ್ಥಿ ಶ್ರೀ ಪ್ರಾಂಶು ಗುಪ್ತಾ ರವರ ಪ್ರವೇಶ ಪತ್ರದ ನೊಂದಣಿ ಸಂಖ್ಯೆ:zx0684 ಮತ್ತು ರ‍್ಯಾಂಕಿಂಗ್ ಸಂಖ್ಯೆ: 3047Aನ್ನು ನೀಡಿರುವುದು ಕಂಡು ಬರುತ್ತದೆ.

(iv) ಪ್ರಕರಣ ಸಂಖ್ಯೆ 24:93ಕ್ಕೆ ಸಂಬಂಧಿಸಿದಂತೆ ತನಿಖಾ ದಾಖಲಾತಿಗಳಾದ:–

(ಅ) ತನಿಖಾಧಿಕಾರಿಗಳ ಅಂತಿಮ ವರದಿ,

(ಆ) ಮಹಜರ್ ಕಾಪಿಗಳು,

(ಇ) ಎಫ್.ಐ.ಆರ್.,

(ಈ) ಆಶಿಶ್ ದೊಲಾರಿ ಜೋಷಿ ರವರ ಅಡ್ಮಿಷನ್ ಫಾರಂ

(ಉ) ಆಶಿಶ್ ದೊಲಾರಿ ಜೋಷಿ ಮತ್ತು ಕೆ.ಲಕ್ಷ್ಮೀನಾರಾಯಣ ರವರ ಅರ್ಜಿ ಫಾರಂಗಳು

(ಊ) ಆಶಿಶ್ ದೊಲಾರಿ ಜೋಷಿ ರವರ ಪ್ರವೇಶಾತಿ ಪತ್ರದ ಪ್ರತಿಗಳು

(ಋ) ಆಶಿಶ್ ದೊಲಾರಿ ಜೋಷಿ ರವರಿಗೆ ಶಾಂತಕುಮಾರಶೆಟ್ಟಿ ರವರು ನೀಡಿರುವ ರ‍್ಯಾಂಕ್ ಸರ್ಟಿಫಿಕೇಟ್

(ೠ) ರ‍್ಯಾಂಕಿಂಗ್ ಲಿಸ್ಟ್,

(ಎ) ಬರಹ ತಜ್ಞರ ವರದಿ,

(ಏ) ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ

ಮೇಲ್ಕಂಡ ದಾಖಲಾತಿಗಳು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಇರುವ ಆಪಾದನೆಯನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಇವುಗಳ ಪರಿಶೀಲನೆಯಿಂದ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಹಾಲಿ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರುಗಳು ಪೇಮೆಂಟ್ ಕೋಟಾದಲ್ಲಿ ವೈದ್ಯಕೀಯ ಕೋರ್ಸಿಗೆ ಪ್ರವೇಶ ಬಯಸಿದ್ದ

ಆಶಿಶ್ ದೊಲಾರಿ ಜೋಷಿ ರವರಿಗೆ ಪ್ರವೇಶ ಪತ್ರದ ನೊಂದಣಿ ಸಂಖ್ಯೆ: ಃBA2443 ಮತ್ತು ಮೆಡಿಕಲ್ ರ್‍ಯಾಂಕಿಂಗ್ ಸಂಖ್ಯೆ: 13650ಕ್ಕೆ ಬದಲಾಗಿ ಸಿಇಟಿಯ ಮತ್ತೊಬ್ಬ ಅಭ್ಯರ್ಥಿ ಕೆ.ಲಕ್ಷ್ಮೀನಾರಾಯಣ ರವರ ಪ್ರವೇಶ ಪತ್ರದ ನೊಂದಣಿ ಸಂಖ್ಯೆ:ZV1084 ಮತ್ತು ರ್‍ಯಾಂಕಿಂಗ್ ಸಂಖ್ಯೆ: 4860ಬಿ ನ್ನು ನೀಡಿರುವುದು ಕಂಡು ಬರುತ್ತದೆ.

(V) ಪ್ರಕರಣ ಸಂಖ್ಯೆ 25:93ಕ್ಕೆ ಸಂಬಂಧಿಸಿದಂತೆ ತನಿಖಾ ದಾಖಲಾತಿಗಳಾದ:–
(ಅ) ತನಿಖಾಧಿಕಾರಿಗಳ ಅಂತಿಮ ವರದಿ,
(ಆ) ಮಹಜರ್ ಕಾಪಿಗಳು,
(ಇ) ಎಫ್.ಐ.ಆರ್.,
(ಈ) ಕು. ಶೀತಲ್ ಟಿ.ವೊಗರಾಲಿ ಮತ್ತು ಆಶೀಶ್ ಲೂತ್ರ ರವರುಗಳ ಅರ್ಜಿ ಫಾರಂಗಳು
(ಉ) ಕು. ಶೀತಲ್ ಟಿ.ವೊಗರಾಲಿ ರವರ ಪ್ರವೇಶಾತಿ ಪತ್ರದ ಪ್ರತಿ
(ಊ) ಕು. ಶೀತಲ್ ಟಿ.ವೊಗರಾಲಿ ರವರ ಅಡ್ಮಿಷನ್ ಫಾರಂ
(ಋ) ಕು. ಶೀತಲ್ ಟಿ.ವೊಗರಾಲಿ ರವರಗೆ ಶಾಂತಕುಮಾರಶೆಟ್ಟಿ ರವರು ನೀಡಿರುವ ರ್‍ಯಾಂಕ್ ಸರ್ಟಿಫಿಕೇಟ್
(ೠ) ರ್‍ಯಾಂಕಿಂಗ್ ಲಿಸ್ಟ್,
(ಎ) ಬರಹ ತಜ್ಞರ ವರದಿ,
(ಏ) ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ

ಮೇಲ್ಕಂಡ ದಾಖಲಾತಿಗಳು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಇರುವ ಆಪಾದನೆಯನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಇವುಗಳ ಪರಿಶೀಲನೆಯಿಂದ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಹಾಲಿ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರುಗಳು ಪೇಮೆಂಟ್ ಕೋಟಾದಲ್ಲಿ ವೈದ್ಯಕೀಯ ಕೋರ್ಸಿಗೆ ಪ್ರವೇಶ ಬಯಸಿದ್ದ ಕು.ಶೀತಲ್ ಟಿ.ವೊಗರಾಲಿ ರವರಿಗೆ ಪ್ರವೇಶ ಪತ್ರದ ನೊಂದಣಿ ಸಂಖ್ಯೆ: ಬಿಇ1213 ಮತ್ತು ಮೆಡಿಕಲ್ ರ್‍ಯಾಂಕಿಂಗ್ ಸಂಖ್ಯೆ: 10755ಕ್ಕೆ ಬದಲಾಗಿ ಸಿಇಟಿಯ ಮತ್ತೊಬ್ಬ ಅಭ್ಯರ್ಥಿ ಆಶೀಶ್ ಲೂತ್ರ ರವರ ಪ್ರವೇಶ ಪತ್ರದ ನೊಂದಣಿ ಸಂಖ್ಯೆ:JP1557 ಮತ್ತು ರ್‍ಯಾಂಕಿಂಗ್ ಸಂಖ್ಯೆ: 3871ಎ ನ್ನು ನೀಡಿರುವುದು ಕಂಡು ಬರುತ್ತದೆ.

(vi) ಪ್ರಕರಣ ಸಂಖ್ಯೆ 26:93ಕ್ಕೆ ಸಂಬಂಧಿಸಿದಂತೆ ತನಿಖಾ ದಾಖಲಾತಿಗಳಾದ:–
(ಅ) ತನಿಖಾಧಿಕಾರಿಗಳ ಅಂತಿಮ ವರದಿ,
(ಆ) ಮಹಜರ್ ಕಾಪಿ,
(ಇ) ಎಫ್.ಐ.ಆರ್.,
(ಈ) ಕು.ಕೋವಿ ಕವಿತಾ ಮತ್ತು ರಾಜ ಲಂಗಾರ್ ರವರುಗಳ ಅರ್ಜಿ ಫಾರಂಗಳು
(ಉ) ಕು.ಕೋವಿ ಕವಿತಾರವರ ಪ್ರವೇಶಾತಿ ಪತ್ರದ ಪ್ರತಿ,
(ಊ) ಕು.ಕೋವಿ ಕವಿತಾರವರ ಅಡ್ಮಿಷನ್ ಫಾರಂ
(ಋ) ಕು.ಕೋವಿ ಕವಿತಾರವರಿಗೆ ಶಾಂತಕುಮಾರ ಶೆಟ್ಟಿ ರವರು ನೀಡಿರುವ ರ್‍ಯಾಂಕ್ ಸರ್ಟಿಫಿಕೇಟ್
(ೠ) ರ್‍ಯಾಂಕಿಂಗ್ ಲಿಸ್ಟ್,
(ಎ) ಬರಹ ತಜ್ಞರ ವರದಿ,
(ಏ) ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ

ಮೇಲ್ಕಂಡ ದಾಖಲಾತಿಗಳು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಇರುವ ಆಪಾದನೆಯನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಇವುಗಳ ಪರಿಶೀಲನೆಯಿಂದ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಹಾಲಿ ನಿವೃತ್ತರು) ಹಾಗೂ ಹಿಂದಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ, (ಪ್ರಸ್ತುತ ಸೂಪರಿಟೆಂಡೆಂಟ್, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರುಗಳು ಪೇಮೆಂಟ್ ಕೋಟಾದಲ್ಲಿ ವೈದ್ಯಕೀಯ ಕೋರ್ಸಿಗೆ ಪ್ರವೇಶ ಬಯಸಿದ್ದ ಕು.ಕೋವಿ ಕವಿತಾ ರವರಿಗೆ ಪ್ರವೇಶಾತಿ ಪತ್ರದ ನೊಂದಣಿ ಸಂಖ್ಯೆ:ಜೆವಿ1078 ಮತ್ತು ಮೆಡಿಕಲ್ ರ್‍ಯಾಂಕಿಂಗ್ ಸಂಖ್ಯೆ: 16047ಕ್ಕೆ ಬದಲಾಗಿ ಸಿಇಟಿಯ ಮತ್ತೊಬ್ಬ ಅಭ್ಯರ್ಥಿ ಶ್ರೀ ರಾಜ ಲಂಗಾರ್ ರವರ ನೊಂದಣಿ ಸಂಖ್ಯೆ: ZR2865 ಮತ್ತು ರ್‍ಯಾಂಕಿಂಗ್ ಸಂಖ್ಯೆ: 3148-A ನ್ನು ನೀಡಿರುವುದು ಕಂಡು ಬರುತ್ತದೆ. ಶ್ರೀ ಟಿ.ಕೆ.ಪ್ರಕಾಶ್‌ರವರ ಹೇಳಿಕೆಯಿಂದ ಇವರು ಮತ್ತು ಶ್ರೀ ಹಾಜಿ ಚಾಮ್ದೂರ್ ರವರು ಶ್ರೀ ಎಸ್.ಜಿ.ಬಸವಮುನಿಯಪ್ಪ ರವರಿಗೆ ಕು.ಕೋವಿ ಕವಿತರವರ ಮೂಲ ಹಾಲ್‌ಟಿಕೇಟ್ ಜೊತೆಗೆ ರೂ.25,000/–ನೀಡಿರುವುದು ಕಂಡು ಬರುತ್ತದೆ.

ಮೇಲ್ಕಂಡ 6 ಪ್ರಕರಣಗಳಲ್ಲಿ ಸುಳ್ಳು ರ್‍ಯಾಂಕ್‌ಗಳನ್ನು ನೀಡಿ ಕೃತ್ಯವನ್ನು ಎಸಗಲು ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಶಾಂತಕುಮಾರ ಶೆಟ್ಟಿ ಹಾಗೂ ಅಂದಿನ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಬಸವ ಮುನಿಯಪ್ಪ ರವರುಗಳು ಕಾರಣರಾಗಿರುವುದು ಮೇಲ್ಕಂಡ ದಾಖಲೆಗಳಿಂದ ಕಂಡು ಬರುತ್ತದೆ. ರ್‍ಯಾಂಕಿಂಗ್ ಸರ್ಟಿಫಿಕೇಟ್‌ನ್ನು ಶ್ರೀ ಬಸವಮುನಿಯಪ್ಪರವರ ಚಿಕ್ಕರುಜು ಮತ್ತು ಶ್ರೀ ಶಾಂತಕುಮಾರ ಶೆಟ್ಟಿ ರವರ ಸಹಿಯಲ್ಲಿ ನೀಡಿರುವುದು ರಸಾಯನಿಕ ಪರೀಕ್ಷಾ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಮೇಲ್ಕಂಡ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)ಜೊತೆ ಓದಲಾದ ಕಲಂ 13(2)ರಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದುದರಿಂದ ಇವರನ್ನು ಕಲಂ 120(ಬಿ) ಸಹವಾಚ 420, 468, 474, 511 ಐ.ಪಿ.ಸಿ. ಮತ್ತು ಲಂಚ ನಿರೋಧ ಕಾಯ್ದೆ–1988ರ ಕಲಂ 7, 8, 9 ಮತ್ತು 13(1)(ಡಿ) ಸಹವಾಚ 13(2)ರ ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಲಂಚ ನಿರೋಧ ಕಾಯ್ದೆ–1988ರ ಅಧಿನಿಯಮ 19(1)(ಬಿ)ರ ಪ್ರಕಾರ ಅವಶ್ಯವೆಂದು ಸರ್ಕಾರವು ಮನಗಂಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 98 ಡಿಟಿಇ 2004 ಬೆಂಗಳೂರು, ದಿನಾಂಕ:10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ)ರ ಪ್ರಕಾರ ಪ್ರದತ್ತವಾದ ಅಧಿಕಾರ ಚಲಾಯಿಸಿ ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಆರೋಪಿತ ಶ್ರೀ ಶಾಂತಕುಮಾರ ಶೆಟ್ಟಿ, ಹಿಂದಿನ ಸಹಾಯಕ ನಿರ್ದೇಶಕರು,

ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು (ಹಾಲಿ ನಿವೃತ್ತರು) ಹಾಗೂ ಶ್ರೀ ಬಸವಮುನಿಯಪ್ಪ, ಹಿಂದಿನ ಪ್ರಥಮ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ಇಲಾಖೆ ಬೆಂಗಳೂರು (ಹಾಲಿ ಅಧೀಕ್ಷಕರು, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ), ಇವರುಗಳನ್ನು ಕಲಂ 120(ಬಿ) ಸಹವಾಚ 420, 468, 474, 511 ಐ.ಪಿ.ಸಿ. ಮತ್ತು ಲಂಚ ನಿರೋಧ ಕಾಯ್ದೆ–1988ರ ಕಲಂ 7, 8, 9 ಮತ್ತು 13(1)(ಡಿ) ಸಹವಾಚ 13(2)ರಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಪಡಿಸಲು ಸರ್ಕಾರದ ಮಂಜೂರಾತಿಯನ್ನು ನೀಡುತ್ತಿದ್ದೇನೆ.

1977ರ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಯ 18ನೇ ನಿಯಮದಡಿ ಈ ಆದೇಶವನ್ನು ಹೊರಡಿಸಲಾಗಿದೆ. ಹಾಗೂ ಇದೇ ನಿಯಮಾವಳಿಯ ನಿಯಮ 19(1)ರನ್ವಯ ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 10.3.2005 ರಂದು ಮಂಜೂರಾತಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 426

**ಶೋಭ ನಂಬೀಶನ್**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,

ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**ವಿಷಯ:** ರಾಜ್ಯದ ಪ್ರತಿ ಜಿಲ್ಲೆಯಲ್ಲಿನ ಒಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯನ್ನು ಕುವೆಂಪು ಶತಮಾನೋತ್ಸವ ಶಾಲೆ ಎಂದು ನಾಮಕರಣ ಮಾಡುವ ಬಗ್ಗೆ

**ಓದಲಾಗಿದೆ:** ಪತ್ರದ ಸಂಖ್ಯೆ:ಆಆಶಾ.ಕುವೆಂಪು.ಶ.ಶಾ.ಪಟ್ಟಿ 2004-05 ದಿನಾಂಕ:23-12-2004 ಆಯುಕ್ತರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು ಅವರಿಂದ

**ಪ್ರಸ್ತಾವನೆ :**

ಕುವೆಂಪು ಶತಮಾನೋತ್ಸವವನ್ನು ಆಚರಿಸುತ್ತಿರುವ ಸಂದರ್ಭದಲ್ಲಿ ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಒಂದು ಶಾಲೆಯನ್ನು ಕುವೆಂಪು ಶತಮಾನೋತ್ಸವ ಶಾಲೆಗಳೆಂದು ನಾಮಕರಣ ಮಾಡುವ ಸಲುವಾಗಿ ಸೂಕ್ತ ಶಾಲೆಗಳ ಪಟ್ಟಿಯನ್ನು ಕಳುಹಿಸ ಬೇಕೆಂದು ಸಾರ್ವಜನಿಕ ಶಿಕ್ಷಣ ಇ ಲಾಖೆಯ ಅಧಿಕಾರಿಗಳಿಗೆ ನಿರ್ದೇಶಿಸಲಾಗಿತ್ತು.ಅದರಂತೆ ಕ್ರಮ ಕೈಗೊಂಡ ಆಯುಕ್ತರು,ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:23-12-2004ರ ತಮ್ಮ ಪತ್ರದಲ್ಲಿ ರಾಜ್ಯದ 32 ಶೈಕ್ಷಣಿಕ ಜಿಲ್ಲೆಗಳಲ್ಲಿ ಕುವೆಂಪು ಶತಮಾನೋತ್ಸವ ಶಾಲೆಯೆಂದು ನಾಮಕರಣ ಮಾಡಬಹುದಾದ ಶಾಲೆಗಳ ಪಟ್ಟಿಯನ್ನು ಕಳುಹಿಸಿದ್ದಾರೆ. ಸದರೀ ಪಟ್ಟಿಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 63 ಯೋಯೋಕಾ 2004 ಬೆಂಗಳೂರು,ದಿ:10ನೇ ಮಾರ್ಚ್ 2005**

**(ಇ ಡಿ 125 ಸ್ವೀಮರ (ಯೂನಿಕ್)2005, ದಿನಾಂಕ: 10-03-2005)**

ಸರ್ಕಾರವು ಈ ಮುಂದೆ ತಿಳಿಸಿದ 32 ಶೈಕ್ಷಣಿಕ ಜಿಲ್ಲೆಗಳಲ್ಲಿನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಕುವೆಂಪು ಶತಮಾನೋತ್ಸವ ಶಾಲೆಗಳೆಂದು ನಾಮಕರಣ ಮಾಡುತ್ತದೆ.

| ಕ್ರ.ಸಂ | ಜಿಲ್ಲೆಗಳು | ಶಾಲೆಯ ಹೆಸರು ಮತ್ತು ಜಿಲ್ಲೆಯ ಹೆಸರು |
|---|---|---|
| 1 | ಬಾಗಲಕೋಟೆ | ಸ.ಹಿರಿಯ ಪ್ರಾಥಮಿಕ ಶಾಲೆ,ತುಳಸೀಗೆರೆ,ಬಾಗಲಕೋಟೆ ತಾ, |
| 2 | ಬೆಳಗಾಂ | ಸ.ಹಿರಿಯ ಪ್ರಾಥಮಿಕ ಶಾಲೆ,ನೇಸರಗಿ,ಬೈಲಹೊಂಗಲ ತಾ |
| 3 | ದಾವಣಗೆರೆ | ಸ.ಹಿರಿಯ ಪ್ರಾಥಮಿಕ ಶಾಲೆ,ಬೆಳವನೂರು,ದಾವಣಗೆರೆ ದಕ್ಷಿಣ |
| 4 | ಬೆಂಗಳೂರು ಉತ್ತರ | ಸ.ಹಿರಿಯ ಪ್ರಾಥಮಿಕ ಶಾಲೆ,ಉಲ್ಲಾಳ ಉಪನಗರ,ಬೆಂಗಳೂರು ಉತ್ತರ ಜಿಲ್ಲೆ |
| 5 | ಬೆಂಗಳೂರು ದಕ್ಷಿಣ | ಸ.ಹಿರಿಯ ಪ್ರಾಥಮಿಕ ಶಾಲೆ,ಇ ಮ್ಮಡಿ ಹಳ್ಳಿ,ಬೆಂಗಳೂರು ದಕ್ಷಿಣ |
| 6 | ಬೀದರ್ | ಸ.ಹಿರಿಯ ಪ್ರಾಥಮಿಕ ಶಾಲೆ,ಚಾಳಕಾಪುರ,ಭಾಲ್ಕಿ ತಾ |
| 7 | ಬಿಜಾಪುರ | ಸ.ಹಿರಿಯ ಪ್ರಾಥಮಿಕ ಶಾಲೆ,ಬಸವನಬಾಗೇವಾಡಿ |
| 8 | ಮಂಡ್ಯ | ಸ.ಹಿರಿಯ ಪ್ರಾಥಮಿಕ ಶಾಲೆ,ಅರಕೇಶ್ವರ ನಗರ,ಮಂಡ್ಯ ಟೌನ್ |
| 9 | ಮಂಗಳೂರು | ದ.ಕ.ಜಿ.ಪಂ.ಸ.ಹಿರಿಯ ಪ್ರಾಥಮಿಕ ಶಾಲೆ,ನಲ್ಯಪಡುವು,ಮಂಗಳೂರು |
| 10 | ಮೈಸೂರು | ಸ.ಹಿರಿಯ ಪ್ರಾಥಮಿಕ ಶಾಲೆ,ಮೇಟಗಳ್ಳಿ, ಮೈಸೂರು ತಾ |
| 11 | ಉಡುಪಿ | ಸ.ಹಿರಿಯ ಪ್ರಾಥಮಿಕ ಶಾಲೆ,ತೆಕ್ಕಟ್ಟೆ,ಕುಂದಾಪುರ ತಾ. |
| 12 | ಹಾವೇರಿ | ಸ.ಹಿರಿಯ ಪ್ರಾಥಮಿಕ ಶಾಲೆ,ಕಬ್ಬೂರು,ಹಾವೇರಿ ತಾ |
| 13 | ಚಾಮರಾಜನಗರ | ಸ.ಹಿರಿಯ ಪ್ರಾಥಮಿಕ ಶಾಲೆ,ಮೇಗಲಹುಂಡಿ,ಚಾಮರಾಜನಗರ ತಾ. |
| 14 | ಉತ್ತರ ಕನ್ನಡ | ಸ.ಹಿರಿಯ ಪ್ರಾಥಮಿಕ ಶಾಲೆ, ತೋಡೂರ ಕಾಲೋನಿ, ಪುನರ್ವಸತಿ, ಕಾರವಾರ ತಾ. |
| 15 | ಬೆಂ.ಗ್ರಾ,ಜಿಲ್ಲೆ | ಸ.ಹಿರಿಯ ಪ್ರಾಥಮಿಕ ಶಾಲೆ,ಶೆಟ್ಟಿಹಳ್ಳಿ,ಚನ್ನಪಟ್ಟಣ ತಾ. |
| 16 | ತುಮಕೂರು | ಸ.ಹಿರಿಯ ಪ್ರಾಥಮಿಕ ಶಾಲೆ,ಬೆಳ್ಳಾವಿ,ತುಮಕೂರು ತಾ. |
| 17 | ಬಳ್ಳಾರಿ | ಸ.ಹಿರಿಯ ಪ್ರಾಥಮಿಕ ಶಾಲೆ,ಶ್ರೀಧರ ಗಡ್ಡ,ಬಳ್ಳಾರಿ ಪೂರ್ವ |
| 18 | ಧಾರವಾಡ | ಸ.ಮಾದರಿ ಹಿ.ಪ್ರಾ.ಶಾಲೆ,ಕಲ್ಲೂರು,ಧಾರವಾಡ ತಾ. |
| 19 | ಚಿಕ್ಕಮಗಳೂರು | ಸ.ಹಿರಿಯ ಪ್ರಾಥಮಿಕ ಶಾಲೆ,ಅಲ್ಲಂಪುರ,ಚಿಕ್ಕಮಗಳೂರು ತಾ. |
| 20 | ಕೊಪ್ಪಳ | ಸ.ಹಿರಿಯ ಪ್ರಾಥಮಿಕ ಶಾಲೆ, ಕಿನ್ನಾಳ,ಕೊಪ್ಪಳ ತಾ. |
| 21 | ಕೋಲಾರ | ಸ.ಹಿರಿಯ ಪ್ರಾಥಮಿಕ ಶಾಲೆ,ಪೋಳಾರು,ಕೋಲಾರ ತಾ. |
| 22 | ಶಿವಮೊಗ್ಗ | ಸ.ಹಿರಿಯ ಪ್ರಾಥಮಿಕ ಶಾಲೆ,ಮಾಳೂರು, ತೀರ್ಥಹಳ್ಳಿ ತಾ |

| ಕ್ರ.ಸಂ | ಜಿಲ್ಲೆಗಳು | ಶಾಲೆಯ ಹೆಸರು ಮತ್ತು ಜಿಲ್ಲೆಯ ಹೆಸರು |
|---|---|---|
| 23 | ಚಿತ್ರದುರ್ಗ | ಸ.ಹಿರಿಯ ಪ್ರಾಥಮಿಕ ಶಾಲೆ,ಗುತ್ತಿನಾಡು, ಚಿತ್ರದುರ್ಗ ತಾ. |
| 24 | ಹಾಸನ | ಸ.ಹಿರಿಯ ಪ್ರಾಥಮಿಕ ಶಾಲೆ,ಹಕ್ಕಿಹಾಳ, ಹಾಸನ ತಾ. |
| 25 | ಕೊಡಗು | ಸ.ಹಿರಿಯ ಪ್ರಾಥಮಿಕ ಶಾಲೆ,ಹಾಕಿತ್ತಾರು,ಮಡಿಕೇರಿ ತಾ |
| 26 | ರಾಯಚೂರು | ಸ.ಹಿರಿಯ ಪ್ರಾಥಮಿಕ ಶಾಲೆ,ಮರ್ಜಡ್,ರಾಯಚೂರು ತಾ. |
| 27 | ಮಧುಗಿರಿ | ಸ.ಹಿರಿಯ ಪ್ರಾಥಮಿಕ ಶಾಲೆ,ಮಿಡಿಗೇಶಿ,ಮಧುಗಿರಿ ತಾ. |
| 28 | ಗುಲ್ಬರ್ಗ | ಸ.ಹಿರಿಯ ಪ್ರಾಥಮಿಕ ಶಾಲೆ,ನಂದಿಕೂರ್,ಗುಲ್ಬರ್ಗ ತಾ. |
| 29 | ಚಿಕ್ಕಬಳ್ಳಾಪುರ | ಸ.ಹಿರಿಯ ಪ್ರಾಥಮಿಕ ಶಾಲೆ,ಬೇಮುಂಗಲ, ಶಿಡ್ಲಘಟ್ಟ ತಾ. |
| 30 | ಯಾದಗಿರಿ | ಸ.ಹಿರಿಯ ಪ್ರಾಥಮಿಕ ಶಾಲೆ,ಮಾದವಾರ,ಯಾದಗಿರಿ ತಾ. |
| 31 | ಚಿಕ್ಕೋಡಿ | ಸ.ಹಿರಿಯ ಪ್ರಾಥಮಿಕ ಶಾಲೆ,ಸದಲಗ,ನಿಪ್ಪಾಣಿ ತಾ. |
| 32 | ಗದಗ್ | ಸ.ಹಿರಿಯ ಪ್ರಾಥಮಿಕ ಶಾಲೆ,ಅಸುಂಡಿ,ಗದಗ್ ತಾ. |

ಮೇಲ್ಕಂಡ ಕುವೆಂಪು ಶತಮಾನೋತ್ಸವ ಶಾಲೆಗಳಲ್ಲಿ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಆಯವ್ಯಯ ಬಿಡುಗಡೆ ಸಂಬಂಧ ಪ್ರತ್ಯೇಕವಾಗಿ ಪರಿಶೀಲಿಸಿ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR-427

**ಕೆ.ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ(ಯೋಜನೆ),

ಶಿಕ್ಷಣ ಇ ಲಾಖೆ

**ಕಂದಾಯ ಸಚಿವಾಲಯ**

**ವಿಷಯ:-** ಶ್ರಿ ಆರ್.ಎಸ್. ರಾಘವೇಂದ್ರರಾವ್, ನಿವೃತ್ತ ಶಿರಸ್ತೇದಾರ್ ಇ ವರಿಗೆ ದಿನಾಂಕ 06.03.2003 ರ ಕೆಎಟಿ ಆದೇಶದಂತೆ ವೇತನ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:-**
(1) ಗುಲ್ಬರ್ಗ ವಿಭಾಗಾಧಿಕಾರಿಗಳ ಕಛೇರಿಯ ಆದೇಶ ಸಂಖ್ಯೆ:180 ಇ ಎಸ್‌ಟಿ 1995 ದಿನಾಂಕ:17.10.1995.
(2) ಗುಲ್ಬರ್ಗ ವಿಭಾಗಾಧಿಕಾರಿಗಳ ಕಛೇರಿಯ ಹಿಂಬರಹ ಸಂಖ್ಯೆ:180 ಇ ಎಸ್‌ಟಿ 95/788, ದಿನಾಂಕ:22-11-1995.
(3) ಸರ್ಕಾರದ ಪತ್ರ ಸಂಖ್ಯೆ:ಆರ್‌ಡಿ 253 ಬಿಎಂಎಂ 96, ದಿನಾಂಕ: 21-07-1998.
(4) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:3037/1999 ರಲ್ಲಿ ದಿನಾಂಕ: 06.03.2003 ರಂದು ಮಾಡಿದ ಆದೇಶ.
(5) ಅಡ್ವೋಕೇಟ್ ಜನರಲ್, ಕರ್ನಾಟಕ ರವರ ದಿನಾಂಕ:22/26-03-2004 ರ ಅರೆ ಸರ್ಕಾರಿ ಪತ್ರ.

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 39 ಎಸ್‌ಆರ್‌ಪಿ 1980, ದಿನಾಂಕ:11-12-1980ರ ಪ್ರಕಾರ ಶ್ರೀ ಆರ್.ಎಸ್. ರಾಘವೇಂದ್ರರಾವ್, ಗ್ರಾಮ ಲೆಕ್ಕಿಗರು. ಇ ವರು ಸತತ ಒಂದೇ ಹುದ್ದೆಯಲ್ಲಿ (ಗ್ರಾಮ ಲೆಕ್ಕಿಗರು) 15 ವರ್ಷಗಳಿಗಿಂತ ಹೆಚ್ಚಿನ ಅವಧಿಗೆ ಸೇವೆ ಸಲ್ಲಿಸಿದ ಕಾರಣ ದಿನಾಂಕ: 01.01.1981 ರಿಂದ ಅನ್ವಯಿಸುವಂತೆ ಒಂದು ಹೆಚ್ಚುವರಿ ಕಾಲಮಿತಿ ವೇತನ ಬಡ್ತಿಯನ್ನು ತಹಶೀಲ್ದಾರ್ ಹೊಸಪೇಟೆ ರವರ ಕಛೇರಿಯ ಆದೇಶ ಸಂಖ್ಯೆ: ಆರ್‌ಇ ವಿ ಇ ಎಎಸ್ 152/80-81/A1 ದಿನಾಂಕ: 05.01.1981 ರಲ್ಲಿ ಮಂಜೂರು ಮಾಡಲಾಗಿದೆ. ಸದರಿಯವರು ಬಳ್ಳಾರಿ ಜಿಲ್ಲಾಧಿಕಾರಿಗಳ ಸಂಖ್ಯೆ REV/HO-A/240/81-82/R16, ದಿನಾಂಕ:15.11.1982ರ ಅದೇಶದಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಮುಂಬಡ್ತಿ ಹೊಂದಿರುತ್ತಾರೆ. ಅದರಂತೆಯೇ ಗುಲ್ಬರ್ಗ ವಿಭಾಗಾಧಿಕಾರಿಯವರ ಕಚೇರಿಯ ನಡವಳಿ ಸಂಖ್ಯೆ:164 ESA94(2), ದಿನಾಂಕ:12.05.1995 ರಲ್ಲಿ ಪ್ರಥಮ ದರ್ಜೆ ಸಹಾಯಕ ಹುದ್ದೆಯಿಂದ ಶಿರಸ್ತೇದಾರರ ಹುದ್ದೆಗೆ ಪದೋನ್ನತಿ ನೀಡಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಂತೆ ಗುಲ್ಬರ್ಗ ವಿಭಾಗಾಧಿಕಾರಿಗಳು ಸದರಿ ನೌಕರರ ವೇತನವನ್ನು ಶಿರಸ್ತೇದಾರ್ ಹುದ್ದೆಯಲ್ಲಿ ನಿಗದಿಪಡಿಸಿ ಆದೇಶಿಸಿರುತ್ತಾರೆ.

ಈ ಆದೇಶ ಹೊರಡಿಸುವಾಗ ಸದರಿ ನೌಕರರಿಗೆ ಆರ್ಥಿಕ ಇ ಲಾಖೆಯ ಆದೇಶ ಸಂಖ್ಯೆ FD 39 SRP 80, ದಿನಾಂಕ:11.12.1980 ಪ್ರಕಾರ ದಿನಾಂಕ:01.01.1981 ರಿಂದ ಅನ್ವಯವಾಗುವಂತೆ ಗ್ರಾಮ ಲೆಕ್ಕಾಧಿಕಾರಿ ಹುದ್ದೆಯಲ್ಲಿ ಸತತವಾಗಿ 15 ವರ್ಷ ಸೇವೆ ಸಲ್ಲಿಸಿದ ಕಾರಣಕ್ಕಾಗಿ ಮಂಜೂರು ಮಾಡಲಾದ ಹೆಚ್ಚುವರಿ ವಾರ್ಷಿಕ ವೇತನ ಬಡ್ತಿ ಸದರಿ ಆದೇಶದಲ್ಲಿ ಲೆಕ್ಕಕ್ಕೆ ತೆಗೆದು ಕೊಂಡಿಲ್ಲವೆಂದು ಕೋರಿ ಅದನ್ನು ಉಳಿಸಿಕೊಂಡು ವೇತನ ನಿಗದಿಪಡಿಸುವಂತೆ ವಿಭಾಗಾಧಿಕಾರಿಯವರನ್ನು ಕೋರಿ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ಸದರಿ ನೌಕರರಿಗೆ ಗುಲ್ಬರ್ಗ ವಿಭಾಗಾಧಿಕಾರಿಗಳು ಹಿಂಬರಹ ನೀಡಿ ದಿನಾಂಕ:17.10.1995 ರ ಆದೇಶದಲ್ಲಿ ಮಾಡಲಾದ ವೇತನ ನಿಗದಿ ಸರಿ ಇ ರುತ್ತದೆ ಎಂದು ತಿಳಿಸಿರುತ್ತಾರೆ.

ಶ್ರೀ ಆರ್.ಎಸ್. ರಾಘವೇಂದ್ರರಾವ್ ಇ ವರಿಗೆ ನೀಡಿದ ಹಿಂಬರಹವನ್ನು ಪ್ರಶ್ನಿಸಿ ಅವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ವಿಭಾಗಾಧಿಕಾರಿಗಳು ದಿನಾಂಕ:17.10.1995 ರ ಆದೇಶದಲ್ಲಿ ನಿಗದಿಪಡಿಸಿದ ವೇತನ ಹಾಗೂ ವಿಭಾಗಾಧಿಕಾರಿಯವರು ದಿನಾಂಕ:22.11.1995 ರಂದು ನೀಡಿದ ಹಿಂಬರಹವನ್ನು ವಜಾ ಮಾಡಿ ಆರ್ಥಿಕ ಇ ಲಾಖೆಯ ಆದೇಶ ಸಂಖ್ಯೆ FD 39 SRP 80 ದಿನಾಂಕ: 11.12.1980 ರನ್ವಯ ದಿನಾಂಕ:01.01.1981 ರಿಂದ ಮಂಜೂರು ಮಾಡಲ್ಪಟ್ಟ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು

ಲೆಕ್ಕಕ್ಕೆ ತೆಗೆದುಕೊಂಡು ಪ್ರಥಮ ದರ್ಜೆ ಸಹಾಯಕ ಮತ್ತು ಶಿರಸ್ತೇದಾರರ ಹುದ್ದೆಯಲ್ಲಿ ವೇತನ ನಿಗದಿ ಗೊಳಿಸಲು ಗುಲ್ಬರ್ಗ ವಿಭಾಗಾಧಿಕಾರಿಯವರಿಗೆ ನಿರ್ದೇಶನ ನೀಡಬೇಕೆಂದು ಕೋರಿ ದಿನಾಂಕ:19.02.1996 ರಂದು ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಂತೆ ಗುಲ್ಬರ್ಗ ವಿಭಾಗಾಧಿಕಾರಿಯವರು ತೆಗೆದುಕೊಂಡ ನಿರ್ಧಾರ ಅಂದರೆ ದಿನಾಂಕ:17.10.1995 ರಲ್ಲಿ ವೇತನ ನಿಗದಿಪಡಿಸಿದ ಆದೇಶ ಸರಿ ಇ ರುತ್ತದೆ ಎಂದು ಸರ್ಕಾರದ ಪತ್ರದಲ್ಲಿ ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3) ರಲ್ಲಿನ ಪತ್ರಗಳನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ 3037/99 ದಾಖಲಿಸುವ ಮೂಲಕ ಪ್ರಶ್ನಿಸಲಾಗಿದ್ದು ಈ ಅರ್ಜಿ ದಿನಾಂಕ:06.03.2003 ರಂದು ಇ ತ್ಯರ್ಥಪಡಿಸಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಈ ಕೆಳಗಿನಂತೆ ನಿರ್ದೇಶನ ನೀಡಿದೆ:-

" 5. xxx xxx xxx xxx In the circumstance, it is clear that the reason for refusing to retain the pay of the applicant as determined under Annexure-AI & subsequent determination of his pay is not liable to be re-fixed to the disadvantage of the applicant.

6, Annexure-A9 bearing No. 180 ESB:95/788 dated 22.11.95 & Annexure-A11 bearing No. RD 253 BMM 96 dated 21.7.1998 stand quashed. All the monitory benefits arising from quashing of Annexures A9 & A11 shall stand restored to the applicant. The consequent fixation of his pay and pension till the date of applicants retirement shall also be done and paid to the applicant..

7. In terms stated above, application is allowed.. xxx xxx xxx xxx ".

ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿದ ತೀರ್ಪಿನಂತೆ ಕ್ರಮ ತೆಗೆದುಕೊಳ್ಳುವ ಬಗ್ಗೆ ಪರಿಶೀಲನೆ ಮಾಡಲಾಗಿದೆ. ಸದರಿ ಆದೇಶವನ್ನು ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸುವ ಮೂಲಕ ಪ್ರಶ್ನಿಸುವ ಬಗ್ಗೆ ತೀರ್ಮಾನಿಸಿ ಅದರಂತೆ ಆದೇಶ ಸಂಖ್ಯೆ RD (LC) 148 LWP 03 ದಿನಾಂಕ:03.11.2003 ರಂದು ಆದೇಶ ಹೊರಡಿಸಲಾಗಿದೆ. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿದ ತೀರ್ಪನ್ನು ಮತ್ತು ಸದರಿ ತೀರ್ಪನ್ನು ಪ್ರಶ್ನಿಸಲು ಸರ್ಕಾರ ತೆಗೆದುಕೊಂಡಿದ್ದ ನಿಲುವನ್ನು ಕರ್ನಾಟಕ ಅಡ್ವೊಕೇಟ್ ಜನರಲ್ ರವರು ಪರಿಶೀಲಿಸಿ ನ್ಯಾಯ ಮಂಡಳಿಯು ನೀಡಿದ ತೀರ್ಪು ಸಮರ್ಪಕವಾಗಿರುವುದರಿಂದ ಸದರಿ ತೀರ್ಪನ್ನು ಪ್ರಶ್ನಿಸಲು ತೆಗೆದುಕೊಂಡಿದ್ದ ತೀರ್ಮಾನವನ್ನು ಹಿಂದಕ್ಕೆ ಪಡೆದುಕೊಳ್ಳುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಅಭಿಪ್ರಾಯ ನೀಡಿರುತ್ತಾರೆ. ಅಡ್ವೊಕೇಟ್ ಜನರಲ್ ರವರ ಅಭಿಪ್ರಾಯವನ್ನು ಪರಿಗಣಿಸಿ ಆದೇಶ ಸಂಖ್ಯೆ ಆರ್‌ಡಿ (ಎಲ್‌ಸಿ)182 ಎಲ್‌ಡಬ್ಲ್ಯೂಪಿ 04 ದಿನಾಂಕ:07.12.2004 ರಂದು ಹೊರಡಿಸಿದ ಆದೇಶದಲ್ಲಿ ರಿಟ್ ಅರ್ಜಿ ಸಲ್ಲಿಸಲು ಆದೇಶ ಸಂಖ್ಯೆ RD (LC) 148 LWP 03 ದಿನಾಂಕ:03.11.2003ನ್ನು ಹಿಂದಕ್ಕೆ ಪಡೆಯಲಾಗಿದೆ. ತದನಂತರ ಮತ್ತೆ ಈ ಪ್ರಕರಣವನ್ನು ಆರ್ಥಿಕ ಇ ಲಾಖೆಯೊಂದಿಗೆ ಸಮಾಲೋಚಿಸಲಾಗಿದೆ. ಆರ್ಥಿಕ ಇ ಲಾಖೆಯು ಸಂಖ್ಯೆ: FD 1330 Exp-7/04 ದಿನಾಂಕ:03.02.2005 ರ ಟಿಪ್ಪಣಿಯಂತೆ ನೀಡಿದ ಸಂಬಂಧಪಟ್ಟ ಅಭಿಪ್ರಾಯದ ಉದ್ಧೃತ ಭಾಗ ಈ ಕೆಳಗಿನಂತಿದೆ:

" However, xxx xxxx xxx Finance Department is agree for implementation of the orders of the Tribunal dated 6.3.2003 subject to the strict condition that the Addl. Increment granted in terms of Government Order No. FD 39 SRP 80 dated 11.12.80 shall be ignored while fixing his pay under the provisions of the Karnataka Civil Services (Revised pay) Rules, 1982 as required by the proviso (iv) below Rule-3 of the aforesaid Rules and subject to the further condition that this approval shall not be treated as a precedent for other cases in future."

ಮೇಲೆ ವಿವರಿಸಿದ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 229 ಬಿಎಂಎಂ 1999, ಬೆಂಗಳೂರು, ದಿನಾಂಕ:16ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ 3037/1999 ರಲ್ಲಿ ದಿನಾಂಕ:06.03.2003 ರಂದು ನೀಡಿದ ತೀರ್ಪಿನಲ್ಲಿ ಗುಲ್ಬರ್ಗ ವಿಭಾಗಾಧಿಕಾರಿಗಳ ಕಛೇರಿಯ ಹಿಂಬರಹ ಸಂಖ್ಯೆ:180 ಇ ಎಸ್‌ಟಿ 95/788, ದಿನಾಂಕ:22-11-1995 ಮತ್ತು ಸರ್ಕಾರದ ಪತ್ರ ಸಂಖ್ಯೆ:ಆರ್‌ಡಿ 253 ಬಿಎಂಮ 96, ದಿನಾಂಕ: 21-07-1998 ಗಳನ್ನು ವಜಾ ಮಾಡಿರುವುದರಿಂದ, ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿದ ತೀರ್ಪನ್ನು ಅನುಷ್ಠಾನಗೊಳಿಸಿ ಸರ್ಕಾರದ ಆರ್ಥಿಕ ಇ ಲಾಖೆಯು ನೀಡಿದ ಅಭಿಪ್ರಾಯ ಹಾಗೂ ಷರತ್ತಿಗೆ ಒಳಪಡಿಸಿ (ಪ್ರಸ್ತಾವನೆಯಲ್ಲಿ ಉದ್ಧರಿಸಿದಂತೆ) ಶ್ರೀ ಆರ್.ಎಸ್ ರಾಘವೇಂದ್ರರಾವ್, ನಿವೃತ್ತ ಶಿರಸ್ತೇದಾರ್, ಇ ವರ ವೇತನ ಹಾಗೂ ನಿವೃತ್ತಿ ವೇತನವನ್ನು ಪುನರ್ ನಿಗದಿಗೊಳಿಸಲು ಬಳ್ಳಾರಿ ಜಿಲ್ಲಾಧಿಕಾರಿಗಳು ಕೂಡಲೇ ಕ್ರಮತೆಗೆದುಕೊಳ್ಳತಕ್ಕದ್ದೆಂದು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇ ಲಾಖೆಯ ಟಿಪ್ಪಣಿ ಸಂಖ್ಯೆ FD 1330 Exp-7/04 ದಿನಾಂಕ: 03.02.2005 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR-431

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇ ಲಾಖೆ(ಸೇವೆಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** 2004-2005 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು 9 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:**
1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ :ಆರ್ 17014 : 12 : 2004 ಡಿಆರ್‌ಡಿಎ (ಎಸ್‌ಆರ್ ನಂ.20) ದಿನಾಂಕ 28.04.2004, 21-12-2004, (ಎಸ್‌ಆರ್ ನಂ.155), ದಿನಾಂಕ 03-02-2005 ಮತ್ತು ಎಸ್ ನಂ.177), ದಿನಾಂಕ 17-02-2005.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 04 ದಿ: 22.05.2004, 22.1.2005 ಮತ್ತು 7.3.2005.
3) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್ 17014/12/2004 ಡಿಆರ್‌ಡಿಎ (ಎಸ್‌ನಂ. 194) ದಿನಾಂಕ: 10.3.2005.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2004-05ನೇ ಸಾಲಿಗೆ ಒಂದನೇ ಕಂತಿನ ಹಣ ಅನುಕ್ರಮವಾಗಿ ರೂ. 5,10,68,000, ರೂ. 1,70,23,000 ಹಾಗೂ 2ನೇ ಕಂತಿನ ಹಣ ರೂ. 1,62,97,000.00 ಹಾಗೂ ರೂ. 54,33,000 ಗಳನ್ನು 16 ಜಿಲ್ಲೆಗಳಿಗೆ ಬಿಡುಗಡೆ ಮಾಡಿದೆ. ಕೇಂದ್ರ ಸರ್ಕಾರ ಈಗ ರಾಜ್ಯದ 9 ಜಿಲ್ಲೆಗಳಿಗೆ ಒಟ್ಟು ರೂ. 99,87,000 ಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಇ ದಕ್ಕನುಗುಣವಾಗಿ ರೂ. 33,30,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2005**

ರಾಜ್ಯ ಸರ್ಕಾರವು ಈ ಕೆಳಕಂಡ 9 ಜಿಲ್ಲಾ ಪಂಚಾಯತ್‌ಗಳಿಗೆ ಆಡಳಿತ ವೆಚ್ಚಕ್ಕಾಗಿ ಎರಡನೇ ಕಂತಿನ ಹಣ ರೂ. 33,30,000 ಗಳನ್ನು (ರೂ.ಮೂವತ್ತಮೂರು ಲಕ್ಷದ ಮೂವತ್ತು ಸಾವಿರ ಮಾತ್ರ) ಅನುಬಂಧ ತೋರಿಸಿರುವ ಜಿಲ್ಲಾಪಂಚಾಯತಿಗಳಿಗೆ ಕೆಳಗಿನ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇ ನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇ ತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) 2004-2005 ನೇ ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201).

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇ ವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರ ಸಹಮತಿ ಸಂಖ್ಯೆ : ಗ್ರಾಅಪ 78 ಪಿಬಿಎಸ್ 05 ದಿನಾಂಕ 16-03-2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ. 31 /05 ದಿನಾಂಕ 17-03-2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 17.3.2005ಕ್ಕೆ ಅನುಬಂಧ**

(ರೂ.ಗಳಲ್ಲಿ)

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಪಂಚಾಯತಿಯ ಕೋಡ್ | ಡಿ.ಡಿ.ಒ. ಕೋಡ್ | ಬಿಡುಗಡೆಯಾಗಿರುವ ಕೇಂದ್ರದ ಪಾಲು | ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಹಣ |
|---|---|---|---|---|---|
| 1 | ಬೆಳಗಾಂ | 413 | 2200ZZ0002 | 12,00,000 | 4,00,000 |
| 2 | ಬೀದರ್ | 419 | 3800ZZ5701 | 9,64,000 | 3,21,000 |
| 3 | ಬಿಜಾಪುರ | 414 | 2800ZZ9152 | 9,86,000 | 3,29,000 |
| 4 | ಗದಗ್ | 462 | 2600ZZ0001 | 9,53,000 | 3,18,000 |
| 5 | ಕೊಡಗು | 411 | 1200ZZ0001 | 8,27,000 | 2,76,000 |
| 6 | ಕೋಲಾರ | 404 | 0700ZZ8002 | 8,14,000 | 2,71,000 |
| 7 | ರಾಯಚೂರು | 420 | 3600ZZ0001 | 15,11,000 | 5,04,000 |
| 8 | ಶಿವಮೊಗ್ಗ | 405 | 1400ZZ0002 | 18,20,000 | 6,07,000 |
| 9 | ಉತ್ತರ ಕನ್ನಡ | 416 | 3000ZZ0080 | 9,12,000 | 3,04,000 |
| | ಒಟ್ಟು | | | 99,87,000 | 33,30,000 |

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 435

ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ

**ವಿಷಯ:** 2004-2005 ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣ ದ. ಕನ್ನಡ ಮತ್ತು ರಾಯಚೂರು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಓದಲಾಗಿದೆ:**
1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17013 : 10 : 2004 ಎಸ್‌ಜಿಎಸ್‌ವೈ-I (13) ದಿನಾಂಕ 22-04-2004 ಮತ್ತು (58) ದಿನಾಂಕ 16-11-2004, (80) ದಿನಾಂಕ 16-12-2004, (115) ದಿನಾಂಕ 06-01-2005, (131) ದಿನಾಂಕ 25-01-2005 ಮತ್ತು (156) ದಿನಾಂಕ 17-02-2005.
2) ಸಂಖ್ಯೆ ಆಇ 1091 ವೆಚ್ಚ 6 : 2004 ದಿನಾಂಕ 23-08-2004.
3) ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ 17-09-2004, 29-12-2004, 10-01-2005, 27-01-2005, 04-03-2005 ಮತ್ತು 05-03-2005.
4) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 17013 : 10 : 2004 ಎಸ್.ಜಿ.ಎಸ್.ವೈ I (166) ದಿನಾಂಕ : 01-03-2005.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಉಲ್ಲೇಖಿತ ಪತ್ರ (1) ಮತ್ತು (3) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್.ಜಿ.ಎಸ್.ವೈ) ಒಂದನೇ ಕಂತಿನ ಹಣ ರೂ.20,03,38,000-00 ಮತ್ತು ರೂ. 6,67,79,000 ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಇ ಪ್ಪತ್ತು ಜಿಲ್ಲೆಗಳಿಗೆ ಎರಡನೇ ಕಂತಿನ ಕೇಂದ್ರ ಪಾಲಿನ ಹಣ ರೂ. 14,62,96,000 ಮತ್ತು 4,87,66,000 ಗಳನ್ನು ಬಿಡುಗಡೆ ಮಾಡಿವೆ. (ಓದಲಾದ ಕ್ರಮಸಂಖ್ಯೆ (1) ಮತ್ತು (3)ರಂತೆ.) ಈಗ ಕೇಂದ್ರ ಸರ್ಕಾರ ಓದಲಾದ ಕ್ರಮಸಂಖ್ಯೆ (4) ರಂತೆ ದ. ಕನ್ನಡ ಮತ್ತು ರಾಯಚೂರು ಜಿಲ್ಲಾ ಪಂಚಾಯತ್‌ಗಳಿಗೆ ರೂ. 81,92,000 ಗಳನ್ನು ಬಿಡುಗಡೆ ಮಾಡಿದೆ. ಇ ದಕ್ಕನುಗುಣವಾಗಿ ರಾಜ್ಯದ ಪಾಲಿನ ಹಣ ರೂ.27,31,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ :

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 18 ಸ್ವಜಯೋ 2004, ಬೆಂಗಳೂರು ದಿನಾಂಕ: 18ನೇ ಮಾರ್ಚ್ 2005**

ರಾಜ್ಯ ಸರ್ಕಾರವು ದ. ಕನ್ನಡ ಮತ್ತು ರಾಯಚೂರು ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಹಣ ರೂ. 27,31,000-00 ಗಳನ್ನು (ರೂ. ಇ ಪ್ಪತೇಳು ಲಕ್ಷದ ಮೂವತ್ತೊಂದು ಸಾವಿರ ಮಾತ್ರ) ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿ.ಪಂ. ಹೆಸರು | ಜಿ.ಪಂ. ಕೋಡ್ | ಡಿ.ಡಿ.ಒ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ 2ನೇ ಕಂತು | ರಾಜ್ಯಸರ್ಕಾರ ಬಿಡುಗಡೆ ಮಾಡುತ್ತಿರುವ 2ನೇ ಕಂತು |
|---|---|---|---|---|---|
| 1 | ದ. ಕನ್ನಡ | 409 | 1900ZZ0047 | 25,80,000 | 8,60,000 |
| 2 | ರಾಯಚೂರು | 420 | 3600ZZ0001 | 56,12,000 | 18,71,000 |
| | ಒಟ್ಟು | | | 81.92,000 | 27,31,000 |

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿ ಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-07- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ - ಯೋಜನೆ 2004-2005 (2501-01-196-1-07) ರಡಿ ಭರಿಸತಕ್ಕದ್ದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ದ.ಕನ್ನಡ ಮತ್ತು ರಾಯಚೂರು ಜಿಲ್ಲೆ ಇ ವರು ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005 ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಅಭಿವೃದ್ಧಿ) ಇ ವರು ಸರ್ಕಾರಕ್ಕೆ ಸಲ್ಲಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ದ.ಕನ್ನಡ ಮತ್ತು ರಾಯಚೂರು ಜಿಲ್ಲೆ ಇ ವರುಗಳು ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ದ.ಕನ್ನಡ ಮತ್ತು ರಾಯಚೂರು ಜಿಲ್ಲೆ ಇ ವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರ ಸಹಮತಿ ಸಂಖ್ಯೆ : ಗ್ರಾಅಪ 76 ಪಿಬಿಎಸ್ 05 ದಿನಾಂಕ 17 -03-2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ. 32 /05 ದಿನಾಂಕ 18 -03-2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 436

**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಹೊಸದಾಗಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸುವ ಬಗ್ಗೆ ರಾಜ್ಯ ಸರ್ಕಾರದ ನೀತಿ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಿಐ 91 ಎಸ್‌ಜಿಎಫ್ 2001 ದಿನಾಂಕ 22.09.2001

**ಪ್ರಸ್ತಾವನೆ :**

1) ಸಕ್ಕರೆ ಉದ್ಯಮವನ್ನು 1988ರಲ್ಲಿ ಪರವಾನಿಗೆಯಿಂದ ಮುಕ್ತಗೊಳಿಸಿದ ಕಾರಣ ಬಹಳಷ್ಟು ಉದ್ದಿಮೆದಾರರು ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಮುಂದೆ ಬಂದಿದ್ದರಿಂದ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಹಲವು ಸಕ್ಕರೆ ಕಾರ್ಖಾನೆಗಳಿಗೆ ಹಾಗೂ ಪ್ರಾರಂಭವಾಗುತ್ತಿರುವ ಕೆಲವು ಕಾರ್ಖಾನೆಗಳಿಗೆ ಕಬ್ಬಿನ ಮೀಸಲು ಕ್ಷೇತ್ರಗಳನ್ನು, ಕಬ್ಬು (ನಿಯಂತ್ರಣ) ಕಾಯ್ದೆ 1966ರ ನಿಯಮ 6ರನ್ವಯ ಹಂಚಿಕೆ ಮಾಡಲು ಕೆಲವು ತೀವ್ರ ಸಮಸ್ಯೆಗಳು ಕಂಡುಬಂದವು. ಈ ಸಮಸ್ಯೆ ಹಾಗೂ ರಾಜ್ಯದಲ್ಲಿ ಹೊಸದಾಗಿ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಅನುಮತಿ ನೀಡುವ ಬಗ್ಗೆ ಪರಿಶೀಲಿಸಿ, ಶಿಫಾರಸ್ಸು ಮಾಡಲು ಹಾಗೂ ಈ ಕಾರ್ಖಾನೆಗಳಿಗೆ ಕಬ್ಬಿನ ಮೀಸಲು ಕ್ಷೇತ್ರಗಳನ್ನು ನಿಗಧಿಪಡಿಸುವ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಅಂದಿನ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ ಸಿಐ 91 ಎಸ್‌ಜಿಎಫ್ 2001 ದಿನಾಂಕ 22.09.2001ರಲ್ಲಿ ರಚಿಸಲಾಗಿತ್ತು.

2) ಸಮಿತಿಯು ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳೊಂದಿಗೆ ಹಾಗೂ ಸಂಬಂಧಪಟ್ಟ ಇಲಾಖೆಗಳೊಂದಿಗೆ ಸಮಗ್ರವಾಗಿ ಚರ್ಚಿಸಿ ಕೆಳಕಂಡ ಕೆಲವು ಪ್ರಮುಖ ಅಂಶಗಳನ್ನು ಪರಿಶೀಲಿಸಿ

   ಅ) ಶಾಶ್ವತವಾಗಿ ಕಬ್ಬು ಮೀಸಲು ಪ್ರದೇಶವನ್ನು ಕಾದಿರಿಸುವುದು.

   ಆ) ಕಾರ್ಖಾನೆಯ ವಿಸ್ತರಣೆಗೆ ಬೇಕಾಗುವ ಕಬ್ಬಿನ ಪ್ರಮಾಣ

   ಇ) ಚಾಲ್ತಿಯಲ್ಲಿರುವ ಅಥವಾ ಹೊಸ ಸಕ್ಕರೆ ಕಾರ್ಖಾನೆಗೆ ಕಬ್ಬಿನ ಮೀಸಲು ಪ್ರದೇಶವನ್ನು ನಿಗದಿ ಅಥವಾ ಪುನರ್‌ನಿಗದಿಗೊಳಿಸುವಾಗ, ಆಯಾ ಸಕ್ಕರೆ ಕಾರ್ಖಾನೆಗಳ ಹಾಗೂ ಕಬ್ಬು ಬೆಳೆಗಾರರ ಹಿತಾಸಕ್ತಿ ಹಾಗೂ ಬೇಡಿಕೆಯನ್ನು ರಕ್ಷಿಸುವುದು ಮತ್ತು ಅವಹಾಲನ್ನು ಆಲಿಸುವ ಅವಕಾಶವನ್ನು ಒದಗಿಸುವುದು.

   ಈ) ನೀರಾವರಿ ಇಲಾಖೆಯು ಒದಗಿಸಿದ ಮಾಹಿತಿಯ ಮೇರೆಗೆ, ಇನ್ನು ಮುಂದೆ ಅಭಿವೃದ್ಧಿಗೊಳ್ಳಬಹುದೆಂದು ಬಿಂಬಿಸಲಾದ ಕಬ್ಬಿನ ಪ್ರದೇಶ ಹಾಗೂ ಅದಕ್ಕನುಗುಣವಾಗಿ ಕಬ್ಬಿನ ಉತ್ಪಾದನೆಯಲ್ಲಾಗುವ ಹೆಚ್ಚಳ

ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ನಿರ್ಧಿಷ್ಟವಾಗಿ Letter of Intent (LOI) / Industrial Entrepreneurs Memorandum (IEM) ಹೊಂದಿರುವ ಉದ್ದಿಮೆದಾರರಿಗೆ ಸಂಬಂಧಪಟ್ಟ ಜಿಲ್ಲೆಯಲ್ಲಿ ಕಬ್ಬಿನ ಲಭ್ಯತೆ ಪ್ರಮಾಣಕ್ಕೆ ಅನುಗುಣವಾಗಿ ಶಿಫಾರಸ್ಸು ಮಾಡಿರುತ್ತದೆ. ಶಿಫಾರಸ್ಸು ಮಾಡಲು ಪರಿಗಣಿಸಿರುವ ಅಂಶಗಳೆಂದರೆ ಹಾಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಕಾರ್ಯಾರಂಭ ಮಾಡುವ ಹಂತದಲ್ಲಿರುವ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಿಂದ ದೂರದಲ್ಲಿರುವ ಸ್ಥಳವನ್ನು ಹೊಸ ಸಕ್ಕರೆ

ಕಾರ್ಖಾನೆಗಳ ಸ್ಥಾಪನೆಗೆ ಆರಿಸಿಕೊಳ್ಳುವುದು. ಆರಿಸಿಕೊಂಡಿರುವ ಸ್ಥಳದಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಯಾವ ಉದ್ದಿಮೆದಾರರು ಮೊದಲು ಅರ್ಜಿಯನ್ನು ಸಲ್ಲಿಸಿರುತ್ತಾರೆಯೋ ಅಂತಹವರಿಗೆ ಮೊದಲ ಆದ್ಯತೆ ನೀಡುವುದು. ಒಬ್ಬರಿಗಿಂತ ಹೆಚ್ಚಾಗಿ ಅರ್ಜಿಗಳನ್ನು ಸಲ್ಲಿಸಿದ ಪಕ್ಷದಲ್ಲಿ ಮೊದಲನೆಯ ಆದ್ಯತೆಯನ್ನು LOI ಪಡೆದವರಿಗೆ ನೀಡಿ ಜೇಷ್ಠತೆ ಆಧಾರದ ಮೇಲೆ IEM ಪಡೆದವರಿಗೆ ನೀಡುವುದು. ಒಂದು ವೇಳೆ LOI ಪಡೆದವರು ಇಲ್ಲದಿದ್ದ ಪಕ್ಷದಲ್ಲಿ ಜೇಷ್ಠತೆಯ ಆಧಾರದ ಮೇಲೆ IEM ಪಡೆದವರಿಗೆ ನಿರ್ಧಿಷ್ಟವಾದ ಸ್ಥಳದಲ್ಲಿ ಸಕ್ಕರೆ ಘಟಕವನ್ನು ಸ್ಥಾಪಿಸಲು ಅನುಮತಿ ನೀಡುವುದು.

3) ಮುಂದುವರಿದು, ಈ ಕೆಳಗಿನ ಅಂಶಗಳ ಮೇಲೆ ಸಮಗ್ರ ಪರಿಶೀಲನೆಯನ್ನು ಜಿಲ್ಲಾಧಿಕಾರಿಗಳು ಮಾಡಬೇಕೆಂದು ಶಿಫಾರಸ್ಸು ಮಾಡಿದೆ.
   ಅ) ಚಾಲ್ತಿಯಲ್ಲಿರುವ ಸಕ್ಕರೆ ಕಾರ್ಖಾನೆಗಳ ಅವಶ್ಯಕತೆ ಬಗ್ಗೆ
   ಆ) ಈಗಾಗಲೇ ಪ್ರಗತಿಯಲ್ಲಿರುವ ಮತ್ತು ಸಮಿತಿಯು ಶಿಫಾರಸ್ಸು ಮಾಡಿದ ಹೊಸ ಸಕ್ಕರೆ ಘಟಕಗಳ ಅವಶ್ಯಕತೆ ಮತ್ತು ಕಬ್ಬಿನ ಪ್ರದೇಶಗಳ ಹಂಚಿಕೆ ಬಗ್ಗೆ
   ಇ) 2500 ಟಿಸಿಡಿಗಿಂತ ಕಡಿಮೆ ಸಾಮರ್ಥ್ಯ ಹೊಂದಿರುವ ಚಾಲ್ತಿಯಲ್ಲಿರುವ ಸಕ್ಕರೆ ಕಾರ್ಖಾನೆಗಳನ್ನು ಎಲ್ಲೆಲ್ಲಿ ಸಾಧ್ಯವೋ ಮತ್ತು ಆಯಾ ಕಾರ್ಖಾನೆಗಳ ದಕ್ಷತೆಯನ್ನಾಧರಿಸಿ 2500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಕಬ್ಬಿನ ಪ್ರದೇಶವನ್ನು ನಿಗಧಿಪಡಿಸುವ ಬಗ್ಗೆ.
   ಈ) 2500 ಟಿಸಿಡಿ ಸಾಮರ್ಥ್ಯಕ್ಕಿಂತ ಕಡಿಮೆ ಇರುವ ಹಾಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳನ್ನು ಹೊರತುಪಡಿಸಿ ಉಳಿದ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಿಸುವ ಬಗ್ಗೆ.

4) ಮುಂದುವರಿದು, ಕಬ್ಬಿನ ಲಭ್ಯತೆಗೆ ಮೀರಿ ಈಗಾಗಲೇ ರಾಜ್ಯದ ಸಕ್ಕರೆ ಕಾರ್ಖಾನೆಗಳಿರುವುದರಿಂದ, ಸಾಮರ್ಥ್ಯ ವಿಸ್ತರಣೆ ಪ್ರಸ್ತಾವನೆಗಳಿಗೆ ಸದ್ಯದಲ್ಲಿ ಅನುಮತಿ ನೀಡದಿರಲು ಸಮಿತಿಯು ಶಿಫಾರಸ್ಸು ಮಾಡಿದೆ.

5) ಭಾರತ ಸರ್ಕಾರದ ನೀತಿಯಂತೆ ಹೊಸ ಸಕ್ಕರೆ ಕಾರ್ಖಾನೆಯ ನಡುವೆ ಕನಿಷ್ಟ 15 ಕಿಲೋಮೀಟರ್‌ಗಳ ಸುತ್ತಳತೆಯ ದೂರವಿರಬೇಕು. ಆದುದರಿಂದ, ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸುವ ಸಂಬಂಧ ಸಕ್ಕರೆ ಉದ್ಯಮವನ್ನು ಪರವಾನಿಗೆಯಿಂದ ಮುಕ್ತಗೊಳಿಸಿ, ಹೊಸ ಆಸಕ್ತ ಉದ್ದಿಮೆದಾರರು ಕೇವಲ IEM ಸ್ವೀಕೃತಿಯನ್ನು ಹೊಂದಿರಬೇಕೆಂಬ ಪೂರ್ವ–ಅಗತ್ಯತೆಯನ್ನು ನಿರ್ಧಿಷ್ಟಪಡಿಸಿರುವುದನ್ನು ಹೊರತುಪಡಿಸಿಯೂ ಸಹಾ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಹೊರಡಿಸುವ ಯಾವುದೇ ಆದೇಶದಲ್ಲಿ ನಿಗಧಿಪಡಿಸುವ ಅವಶ್ಯಕತೆಗಳನ್ನು ಪೂರೈಸಬೇಕೆಂದು ಸಮಿತಿಯು ಅಭಿಪ್ರಾಯಪಟ್ಟಿದೆ.

6) ಉನ್ನತ ಮಟ್ಟದ ಸಮಿತಿಯು ತನ್ನ ವರದಿಯನ್ನು ಸಲ್ಲಿಸುವ ವೇಳೆಗಾಗಲೇ ರಾಜ್ಯದಲ್ಲಿ ಹೊಸದಾಗಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು 84 ಉದ್ದಿಮೆದಾರರು ಮುಂದೆ ಬಂದಿದ್ದರು. ಈ ಪ್ರಕರಣಗಳನ್ನು ಪರಿಶೀಲಿಸಿದ ಸಮಿತಿಯು ರಾಜ್ಯದಲ್ಲಿ ವಿವಿಧ ಜಿಲ್ಲೆಗಳಲ್ಲಿ ಲಭ್ಯವಿರುವ ಕಬ್ಬಿನ ಕ್ಷೇತ್ರ, ಕಬ್ಬು ಬೆಳೆಯ ಪ್ರಮಾಣ, ಸಕ್ಕರೆ ಕಾರ್ಖಾನೆಗಳ ಸಂಖ್ಯೆ, ಬೇಕಾಗಿರುವ ಕಬ್ಬಿನ ಪ್ರಮಾಣ, ಈ ಎಲ್ಲಾ ಮಾಹಿತಿಗಳನ್ನು ಸಮಗ್ರವಾಗಿ ಪರಿಶೀಲಿಸಿ, 7 (ಏಳು) ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಪರವಾನಿಗೆ ನೀಡಬಹುದೆಂದು ಶಿಫಾರಸ್ಸು ಮಾಡಿದೆ.

7) ಉನ್ನತ ಮಟ್ಟದ ಸಮಿತಿಯು ನೀಡಿದ ವರದಿಯು ಪರಿಶೀಲನೆಯಲ್ಲಿದ್ದ ಸಮಯದಲ್ಲಿ, ಸಮಿತಿಯು 7 ಕಾರ್ಖಾನೆಗಳಿಗೆ ಶಿಫಾರಸ್ಸು ಮಾಡಿದ್ದು ಒಟ್ಟು 12 (ಹನ್ನೆರಡು) ಹೊಸ ಕಾರ್ಖಾನೆಗಳನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ.

8) ಈ ಹಿನ್ನೆಲೆಯಲ್ಲಿ ಉನ್ನತ ಮಟ್ಟದ ಸಮಿತಿಯು ಮಾಡಿರುವ ನೀತಿಯನ್ನು ಇನ್ನು ಮುಂದೆ ಸ್ಥಾಪನೆಯಾಗುವ ಸಕ್ಕರೆ ಕಾರ್ಖಾನೆಗಳಿಗೆ ಅನ್ವಯಿಸಲು ಸರ್ಕಾರವು ನಿರ್ಧರಿಸಿದ್ದು, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 260 ಎಸ್‌ಜಿಎಫ್ 2004 ಬೆಂಗಳೂರು ದಿನಾಂಕ: 16ನೇ ಮಾರ್ಚ್ 2005.**

ರಾಜ್ಯದಲ್ಲಿ ಇನ್ನು ಮುಂದೆ ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಈ ಕೆಳಕಂಡ ನೀತಿಯನ್ನು ಅನ್ವಯಿಸಲು ಆದೇಶಿಸಿದೆ:

   ಅ) ರಾಜ್ಯದಲ್ಲಿ ಪ್ರಸಕ್ತ ಸಕ್ಕರೆ ಕಾರ್ಖಾನೆಗಳ ಕಬ್ಬಿನ ಅವಶ್ಯಕತೆಯು ಕಬ್ಬಿನ ಲಭ್ಯತೆಯನ್ನು ಮೀರಿರುವುದರಿಂದ, ಯಾವುದೇ ಸಕ್ಕರೆ ಕಾರ್ಖಾನೆಯ ಮುಚ್ಚುವಿಕೆಯಿಂದಾಗಿ ಹೆಚ್ಚುವರಿ ಕಬ್ಬು ಪ್ರದೇಶ ಲಭ್ಯವಾದ ಪ್ರಸಂಗಗಳನ್ನು ಹೊರತುಪಡಿಸಿ, ಇನ್ನಾವುದೇ ಕಾರ್ಖಾನೆಗಳ ಸಾಮರ್ಥ್ಯದ ವಿಸ್ತರಣೆ ಪ್ರಸ್ತಾವನೆಗೆ / ಹೊಸ ಕಾರ್ಖಾನೆಗಳ ಸ್ಥಾಪನೆಗೆ ಅನುಮತಿ ನೀಡದಿರುವುದು.
   ಅ) ಭಾರತ ಸರ್ಕಾರವು ನಿರ್ಧಿಷ್ಟಪಡಿಸಿರುವಂತೆ, ಕಬ್ಬು ಪ್ರದೇಶದ ಲಭ್ಯತೆಯನ್ನು ಆಧರಿಸಿ, ಹಾಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಕಾರ್ಯಾರಂಭ ಮಾಡುವ ಹಂತದಲ್ಲಿರುವ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಿಂದ 15 ಕಿ.ಮೀಟರ್ ದೂರದಲ್ಲಿರುವ ಸ್ಥಳವನ್ನು ಹೊಸ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಆರಿಸಿಕೊಳ್ಳುವುದು.
   ಇ) ಆರಿಸಿಕೊಂಡಿರುವ ಸ್ಥಳದಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಒಬ್ಬರಿಗಿಂತ ಹೆಚ್ಚಾಗಿ ಅರ್ಜಿಗಳನ್ನು ಸಲ್ಲಿಸಿದ ಪಕ್ಷದಲ್ಲಿ, ಆದ್ಯತೆಯನ್ನು IEM ಪಡೆದವರಿಗಿಂತ ಜೇಷ್ಠತೆಯಲ್ಲಿ LOI ಪಡೆದವರಿಗೆ ನೀಡುವುದು.
   ಈ) ಒಂದು ವೇಳೆ LOI ಪಡೆದವರು ಇಲ್ಲದಿದ್ದ ಪಕ್ಷದಲ್ಲಿ, ಜೇಷ್ಠತೆಯ ಆಧಾರದ ಮೇಲೆ IEM ಪಡೆದವರಿಗೆ ನಿರ್ಧಿಷ್ಟವಾದ ಸ್ಥಳದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಅವಕಾಶ ನೀಡುವುದು.

ಈ ಆದೇಶವು ತಕ್ಷಣದಿಂದ ಜಾರಿಗೆ ಬರಲಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 437

**ಪಿ. ಆನಂದ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ